# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೨ ಜುಲೈ-ಡಿಸೆಂಬರ್ ೨೦೦೮ ಸಂಚಿಕೆ : ೦೨

ಅ.ನ.ಕೃ. ಮತ್ತು ಜಿ.ಪಿ. ರಾಜರತ್ನಂ ಶತಮಾನ ಸ್ಮರಣೆ

ಸಂಪಾದಕರು

ಪ್ರೊ॥ ಜಿ. ಅಬ್ದುಲ್ ಬಷೀರ್



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ.)
೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೧೯
ದೂರವಾಣಿ : ೨೬೬೧೫೮೭೭

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೨ ಜುಲೈ–ಡಿಸೆಂಬರ್ ೨೦೦೮ ಸಂಚಿಕೆ : ೦೨

## ಅ.ನ.ಕೃ. ಮತ್ತು ಜಿ.ಪಿ. ರಾಜರತ್ನಂ ಶತಮಾನ ಸ್ಮರಣೆ

ಸಂಪಾದಕರು

ಪ್ರೊ. ಜಿ. ಅಬ್ದುಲ್ ಬಷೀರ್



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ. ಕಲಾಭವನ

೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯

ದೂರವಾಣಿ : ೨೬೬೧೫೮೭೭, ಇಮೇಲ್: bms/trust@yahoo.com

**KARNATAKA LOCHANA** - (Half yearly Research Journal) Editor: Prof. G. Abdul Basheer, Published by B.M.Sri. Smaraka Prathistana, M.V.Si. Research Center, B.M.Sri. Kalabhavan, 3rd Main Road, Narasimharaja Colony, Bangalore - 560 019. Ph.No. 080-26615877

Year : July-December 2008 (Vol. 22, No. 02),
Yearly Subscription: **Rs. 100/-** (for Libraries)
For Indivigual : **Rs. 50/-**
Singal issue : **Rs. 30/-**

ಪ್ರತಿಷ್ಠಾನದ ಆಜೀವ ಸದಸ್ಯತ್ವ : ರೂ. ೫೦೦/-
ವಾರ್ಷಿಕ : ರೂ. ೫೦/- (ಸದಸ್ಯರಿಗೆ ಲೋಚನ ಉಚಿತ)



ಮುದ್ರಣ
ಇಳಾ ಮುದ್ರಣ
ನಂ. ೩೬, ೪೦ ಅಡಿ ರಸ್ತೆ
ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು - ೫೬೦ ೦೨೬
ದೂರವಾಣಿ : ೨೬೭೫೭೧೫೯

# ಸಂಪಾದಕೀಯ

**ಈ** ಸಂಚಿಕೆಯನ್ನು (ಜುಲೈ-ಡಿಸೆಂಬರ್ ೨೦೦೮) ಈ ವರ್ಷ ಇಬ್ಬರು ಮಹನೀಯರ ಜನ್ಮ ಶತಮನೋತ್ಸವ ವರ್ಷವಾಗಿರುವುದರಿಂದ ಅವರ ಸ್ಮರಣೆಯಲ್ಲಿ ಹೆಸರಿಸಲಾಗಿದೆ. ಒಬ್ಬರು ಕಾದಂಬರಿ ಸಾರ್ವಭೌಮರೆಂದು ಖ್ಯಾತನಾಮರಾಗಿದ್ದ ಡಾ॥ ಅ.ನ.ಕೃಷ್ಣರಾಯರು, ಇನ್ನೊಬ್ಬರು ಶ್ರೇಷ್ಠ ಕವಿ ಸಾಹಿತಿ ಚಿಂತಕರಾಗಿದ್ದ ಡಾ॥ ಜಿ.ಪಿ. ರಾಜರತ್ನಂ. ಇಬ್ಬರೂ ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಕೊಟ್ಟಿರುವ ಕೊಡುಗೆ ಅನನ್ಯವಾದದ್ದು. ಈ ಇಬ್ಬರ ಶತಮನೋತ್ಸವ ಕಾರ್ಯಕ್ರಮಗಳನ್ನು ಪ್ರತಿಷ್ಠಾನ ಅರ್ಥಪೂರ್ಣವಾಗಿ ನಡೆಸಿದೆ. ಈ ಸಂಚಿಕೆಯಲ್ಲಿ ಇವರುಗಳನ್ನು ಕುರಿತ ಒಂದೊಂದು ಪರಿಚಯತ್ಮಕ ಲೇಖನಗಳನ್ನು ಶತಮನೋತ್ಸವ ಸ್ಮರಣೆಗಾಗಿ ಪ್ರಕಟಿಸಲಾಗಿದೆ.

೩೦-೧೦-೦೮ರಂದು ಕೇಂದ್ರ ಸರ್ಕಾರ ಕನ್ನಡಕ್ಕೆ 'ಶಾಸ್ತ್ರೀಯ ಭಾಷೆ'ಯ ಸ್ಥಾನಮಾನವನ್ನು ನೀಡಿ ಅಧಿಕೃತ ಆದೇಶ ಹೊರಡಿಸಿದೆ. ಕಳೆದ ನಾಲ್ಕು ವರ್ಷಗಳಿಂದ ನಡೆಯುತ್ತಿದ್ದ ಹೋರಾಟಕ್ಕೆ ಇದೀಗ ತೆರೆಬಿದ್ದಿದೆ. ಕನ್ನಡದ ಪ್ರತಿಯೊಂದು ಅಗತ್ಯಗಳನ್ನೂ ಕನ್ನಡಿಗರು ಹೋರಾಟ ಮಾಡಿಯೇ ಪಡೆಯಬೇಕಾಗಿದೆಯೆಂಬುದು ಇದರಿಂದ ಸಾಬೀತಾಗಿಬಿಟ್ಟಿದೆ. ಕೇಂದ್ರ ಸರ್ಕಾರ ತಮಿಳಿಗೆ ಶಾಸ್ತ್ರೀಯ ಭಾಷೆಯನ್ನು ಘೋಷಿಸಿದಾಗಲೇ ಕನ್ನಡಕ್ಕೂ ಘೋಷಿಸಬೇಕಾಗಿತ್ತು. ಆದರೆ ತಮಿಳಿನ ರಾಜಕೀಯದಿಂದ ಯು.ಪಿ.ಎ. ಸರ್ಕಾರದ ಪಕ್ಷಪಾತದಿಂದ ಇಷ್ಟು ತಡವಾಯಿತು. ಈಗಲೂ ರಾಜಕೀಯದಿಂದಲೇ ಇದ್ದಕ್ಕಿದ್ದಂತೆ ಘೋಷಣೆ ಮಾಡಲಾಗಿದೆ. ರಾಜ್ಯದಲ್ಲಿ ಬಿಜೆಪಿ ಸರ್ಕಾರ ಬಂದಿರುವುದರಿಂದ ಮುಖ್ಯಮಂತ್ರಿಗಳು ದೆಹಲಿಯಲ್ಲಿ ಎಲ್ಲ ಸಚಿವರು ಶಾಸಕರ ಜೊತೆ ಧರಣಿ ಕುಳಿತುಕೊಳ್ಳುವುದಾಗಿ ಘೋಷಿಸಿದ್ದರಿಂದ ಎಲ್ಲಿ ಬಿಜೆಪಿಯ ಹೆಸರಿಗೆ ಈ ಕೀರ್ತಿ ಬರುತ್ತದೋ ಎಂದು ಹೆದರಿ ರಾಜ್ಯೋತ್ಸವದ ಕೊಡುಗೆಯಾಗಿ ರಾಜ್ಯೋತ್ಸವದ ಮುನ್ನಾದಿನ ಏಕಾಏಕಿ ಘೋಷಿಸಿ ಸುದ್ದಿಮಾಡಿದೆ.

ಇಂತಹ ರಾಜಕೀಯ ಚದುರಂಗದಾಟಗಳಿಗೆ ಕನ್ನಡ ನಾಡು ನುಡಿಯ ಹಿತ ಬಲಿಯಾಗಿರುವುದು ಆಗುತ್ತಿರುವುದು ವಿಪರ್ಯಾಸ. ಶಾಸ್ತ್ರೀಯ ಭಾಷೆಯ ಪ್ರಸ್ತಾಪವಿದ್ದಾಗ ಕೇಂದ್ರ ರಾಜ್ಯಗಳೆರಡರಲ್ಲೂ ಕಾಂಗ್ರೆಸ್ ಸರ್ಕಾರವಿದ್ದರೂ ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನದ ಘೋಷಣೆ ಮಾಡುವತ್ತ ಗಮನ ಹರಿದಿರಲಿಲ್ಲ. ಕರ್ನಾಟಕದ ಯಾವುದೇ ರಾಜಕೀಯ ಪಕ್ಷಗಳಿಗೆ ನಾಡಿನ ಹಿತ ಆಧ್ಯತೆಯ ಪ್ರಶ್ನೆಯಾಗಿಯೇ ಇಲ್ಲ. ಇನ್ನು ಮುಂದಾದರೂ ನಾಡು-ನುಡಿಯ ಹಿತ ಸರ್ಕಾರಗಳ ಆಧ್ಯತೆಯಾಗಿರುವಂತೆ ಮಾಡುವ ಜವಾಬ್ದಾರಿ ಕನ್ನಡಿಗರ

ಕೈಯಲ್ಲಿದೆ. ಶಾಸ್ತ್ರೀಯ ಭಾಷೆಯ ಗರಿಯನ್ನು ಮುಡಿದು ಕನ್ನಡ ಬೀಗುವ ಸ್ಥಿತಿಯಲ್ಲಿಲ್ಲ. ಜಗತ್ತಿನಲ್ಲೇ ಪ್ರಾಚೀನ ಭಾಷೆಯೆಂದು ದಾಖಲೆಯಾಗಿರುವ ಈ ಸಂದರ್ಭದಲ್ಲಿ ಕರ್ನಾಟಕದಲ್ಲಿ ಅನಾಥವಾಗದಂತೆ ಎಚ್ಚರ ವಹಿಸುವ ಮತ್ತು ಕನ್ನಡತನವನ್ನು ಹೆಮ್ಮೆಯಿಂದ ತೋರಿಸುವ ಅಭಿಮಾನ ಸಮಸ್ತ ಕನ್ನಡಿಗರಲ್ಲೂ ಊಡಬೇಕಾಗಿದೆ.

ಈ ಸಂದರ್ಭಕ್ಕಾಗಿ ಕನ್ನಡ ಶಾಸ್ತ್ರೀಯ ಭಾಷೆಯನ್ನು ಕುರಿತ ಎರಡು ಲೇಖನಗಳನ್ನು ಈ ಸಂಚಿಕೆಯಲ್ಲಿ ಪ್ರಕಟಿಸಿದೆ. ಒಂದು ಶಾಸ್ತ್ರೀಯ ಭಾಷೆಗಾಗಿ ಸತತ ಹೋರಾಡಿದ ಡಾ॥ ದೇ.ಜ.ಗೌ. ಅವರದ್ದು, ಇದು ಈ ಸ್ಥಾನಮಾನಕ್ಕಾಗಿ ಕನ್ನಡಿಗರು ಹೋರಾಡಿದ ಹೋರಾಟವನ್ನು ದಾಖಲಿಸುತ್ತದೆ. ಇನ್ನೊಂದು ಪ್ರಸಿದ್ಧ ವಿದ್ವಾಂಸರಾದ ಡಾ॥ ಬಿ.ವಿ.ವೆಂಕಟಾಚಲಶಾಸ್ತ್ರೀ ಅವರದ್ದು, ಇದು ಈ ಸ್ಥಾನಮಾನಕ್ಕೆ ಸರ್ಕಾರಗಳು ನೀಡುವ ಸೌಲಭ್ಯವನ್ನು ಹೇಗೆ ಉಪಯೋಗಿಸಿಕೊಳ್ಳಬಹುದು ಎಂಬ ಮುಂದಿನ ದಾರಿಗಳನ್ನು ಸೂಚಿಸಿದೆ. ಪ್ರತಿಷ್ಠಾನ ದಿನಾಂಕ..........ರಂದು 'ಶಾಸ್ತ್ರೀಯ ಭಾಷೆ ಮುಂದೇನು' ಎಂಬ ಚಿಂತನ ಗೋಷ್ಠಿಯನ್ನು ನಡೆಸಿತ್ತು ಅದರಲ್ಲಿ ಮಂಡಿಸಿದ್ದ ಟಿಪ್ಪಣಿ ಇದು. ಈ ಎರಡೂ ಲೇಖನಗಳನ್ನು ಬಳಸಿಕೊಳ್ಳಲು ಅನುಮತಿಯತ್ತ ಈ ಇಬ್ಬರೂ ವಿದ್ವಾಂಸರಿಗೆ ಲೋಚನ ಕೃತಜ್ಞವಾಗಿದೆ.

ಈ ಸಂಚಿಕೆಯಿಂದ ಗ್ರಂಥ ವಿಮರ್ಶೆಯನ್ನು ಓದುಗರ ಒತ್ತಾಯದ ಮೇರೆಗೆ ಮತ್ತೆ ಸೇರಿಸುತ್ತಿದ್ದೇವೆ. ಈ ಪತ್ರಿಕೆಯ ಆಶಯಕ್ಕೆ ಅನುಗುಣವಾದ ವಿದ್ವತ್‌ಪೂರ್ಣ, ಅಧ್ಯಯನಪೂರ್ಣ ಸಂಶೋಧನ ಗ್ರಂಥಗಳ ಎರಡು ಪ್ರತಿಗಳನ್ನು ಕಳುಹಿಸಿಬಹುದು. ಇಂತಹ ಗ್ರಂಥಗಳ ವಿಮರ್ಶೆಗಳನ್ನು ಕಳುಹಿಸಬಹುದು.

ಸಂಪಾದಕರು

**ಪ್ರೊ. ಜಿ. ಅಬ್ದುಲ್ ಬಷೀರ್**

# ಪರಿವಿಡಿ


೧. ಕನ್ನಡ ಶಾಸ್ತ್ರೀಯ ಭಾಷೆ ೧
Kannada Classical Language
–ಡಾ. ದೇಜಗೌ

೨. ಶಾಸ್ತ್ರೀಯ ಭಾಷೆಯ ಸ್ಥಾನಮಾನ : ಮುಂದೇನು? ೬
After Classical Language what is the feature
–ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ

**ಶತಮಾನಸ್ಮರಣೆ**

೩. ಅರಕಲಗೂಡು ನರಸಿಂಗರಾಯ ಕೃಷ್ಣರಾಯ ೧೧
Arakalagoodu Narasingaraya-Krishnaraya
–ಎಸ್.ವಿ. ಶ್ರೀನಿವಾಸರಾವ್

೪. 'ಕನ್ನಡ ರತ್ನ' ಜಿ.ಪಿ. ರಾಜರತ್ನಂ ೨೦
'Kannada Diamond': G.P. Rajaratnam
–ಡಾ. ನಾ.ಗೀತಾಚಾರ್ಯ

೫. ವಿಗ್ರಹಾರಾಧನೆಗೊಂದು ಮುನ್ನುಡಿ ೨೯
An Introduction to the `Vigraharaadhane'
–ಎಂ.ಎನ್. ಪ್ರಭಾಕರ್

೬. ಸಂಸ್ಕೃತ ಪ್ರಹಸನಗಳು : ಒಂದು ಅಧ್ಯಯನ ೩೮
Sanskrit Prahasanas: A Study
–ಎಸ್. ಮಲ್ಲನಗೌಡ

೭. ಸಂಗೀತ ಚೂಡಾಮಣೌ ೪೨
Sangeetha Choodamanow
–ಡಾ. ಕೆಳದಿ ಗುಂಡಾಜೋಯಿಸ್

೮. ವಿದ್ವಾಂಸರ ಬರೆವಣಿಗೆಯಲ್ಲಿಯೂ ಕಾಗುಣಿತದ ತಪ್ಪುಗಳು, ವ್ಯಾಕರಣ ದೋಷಗಳು ೪೬
Spelling and gramatical in the Writings of Scholars too Mistakes
–ಪ್ರೊ. ಜಿ. ಅಬ್ದುಲ್ ಬಷೀರ್

೯. ದ್ರಾವಿಡ ಬೃಹಚ್ಚರಣರ ಭಾಷೆಯಲ್ಲಿ 'ಸರ್ವನಾಮ' ಮತ್ತು 'ಸರ್ವಪದಗಳು' ೫೪
Pronouns in 'Dravida Bruacharana' Language
-ಪ್ರೊ. ಕೆ.ಎಸ್. ಮಧುಸೂದನ

ಗ್ರಂಥವಿಮರ್ಶೆ

೧೦. ಆಳ್ವಾರ್‌ಶರಣರ ತಿರುಪತಿ ತಿಮ್ಮಪ್ಪ ೬೦

ಸಂಪಾದಕರ ಮತ್ತು ಲೇಖಕರ ವಿಳಾಸಗಳು ೬೫
Address of the Editor and Writers

# ಕನ್ನಡ ಶಾಸ್ತ್ರೀಯಭಾಷೆ

● ಡಾ. ದೇಜಗೌ

ಇಂಡಿಯಾದಂಥ ಬಹುಭಾಷಾ ರಾಷ್ಟ್ರದಲ್ಲಿ ಯಾವುದಾದರೊಂದು ಭಾಷೆ ಎಷ್ಟೇ ಶ್ರೇಷ್ಠವಾದುದಾಗಿರಲಿ, ಅದಕ್ಕೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸುವಾಗ ತಾತ್ಕಾಲಿಕ ರಾಜಕೀಯ ಲಾಭಗಳನ್ನು ನಿರ್ಲಕ್ಷಿಸಿ, ತಾರತಮ್ಯ ಪಕ್ಷಪಾತಗಳಿಗೆಡೆಗೊಡದೆ, ತಲಸ್ಪರ್ಶಿಯೂ, ಕೂಲಂಕಷವೂ ದೂರದರ್ಶಿಯೂ, ನಿರವಸರವೂ ಆದ ನಿರ್ಣಯವನ್ನು ರೂಪಿಸಬೇಕಾದದ್ದು ಆಡಳಿತಗಾರರ ಧರ್ಮವಾಗಬೇಕು. ೧೮೮೭ರಷ್ಟು ಹಿಂದೆಯೇ ಪರಾತ್ತಿಮಲ್ ಕಲ್ಯೆಂಗ್ನರ್ ಎಂಬ ತಮಿಳು ಪಂಡಿತರೂ, ಇತ್ತೀಚೆಗೆ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದ ಜಾರ್ಜ್‌ಹಾರ್ಡ್ ಎಂಬ ವಿದ್ವಾಂಸರೂ ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ಸಿಗಬೇಕೆಂದು ವಾದಿಸಿದ್ದುಂಟು. ಜಗತ್ತಿನಲ್ಲಿ ತಮಿಳೇ ಅತ್ಯಂತ ಪ್ರಾಚೀನ ಭಾಷೆಯೆಂದು, ಕಲ್ಲು ಮಣ್ಣು ಹುಟ್ಟುವುದಕ್ಕೆ ಮುಂಚೆ ಅರ್ಥಾತ್ ಜಗತ್ತು ಹುಟ್ಟುವುದಕ್ಕೆ ಮುಂಚೆ(?)ಯೇ ಅದು ಇತ್ತೆಂದು ತಮಿಳು ಸರ್ಕಾರದ ನಿರೂಪವೊಂದು ಹೇಳುತ್ತದೆ. ದಿನಾಂಕ:೧೨-೦೯-೨೦೦೪ರಂದು ತಮಿಳಿಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನವನ್ನು ಕೇಂದ್ರ ಸರ್ಕಾರ ಘೋಷಿಸಿದಾಗ, ಅದು ತನ್ನ ಮುಂದಿರಿಸಿಕೊಂಡ ಮಾನದಂಡಗಳು ನಾಲ್ಕು.

೧ ಭಾಷೆ ಪುರಾತನವಾದುದಾಗಿರಬೇಕು.
೨ ಅದು ಸ್ವತಂತ್ರವಾಗಿ ಹುಟ್ಟಿ ಬೆಳೆದಿರಬೇಕು.
೩ ಅದು ಯಾವ ಭಾಷೆಯ ಪ್ರಭಾವಕ್ಕೂ ಒಳಪಡಬಾರದು.
೪ ಶ್ರೇಷ್ಠವೂ ಆದ ಸಾಹಿತ್ಯವನ್ನು ಹೊಂದಿರಬೇಕು.

ತಮಿಳಿನ ಪ್ರಾಚೀನತೆಯಾಗಲಿ, ಸ್ವತಂತ್ರತೆಯಾಗಲಿ, ಅನ್ಯಭಾಷೆಯ ಪ್ರಭಾವಕ್ಕದು ಒಳಪಡಲಿಲ್ಲವೆಂಬ ಹೇಳಿಕೆಯಾಗಲಿ, ಸತ್ಯಕ್ಕೆ ದೂರವಾದ ಸಂಗತಿಗಳು, ಕಟ್ಟುಕತೆಗಳ ಆಧಾರದ ಮೇಲೆ ತಮಿಳರು ತಮ್ಮ ನಿರ್ಣಯಗಳನ್ನು ಸಾಧಿಸುತ್ತಾರೆ. ಸರಿಸರಿ ಸಾಹಿತ್ಯದ

ಕಾಲ ಕ್ರಿಪೂ. ೧೭೫೦ ರಿಂದ ಕ್ರಿಶ. ಹನ್ನೆರಡನೆಯ ಶತಮಾನದ ತನಕ ಕಾಪಾಡುತ್ತದೆ. ತಮಿಳು ಸಾಹಿತ್ಯ ಕ್ರಿಶ. ೯ನೆಯ ಶತಮಾನಕ್ಕಿಂತ ಹಿಂದೆ ಇದ್ದಿರಲಾರದೆಂದೂ ಪ್ರೊ. ಬಿ.ಜಿ.ಎಲ್. ಸ್ವಾಮಿ ಸೋದಾಹರಣವಾಗಿ ಸ್ಪಷ್ಟಪಡಿಸಿದ್ದಾರೆ. ಕನ್ನಡಿಗರು, ತೆಲುಗರು ಸಹ ಸರಿಸರಿ ಸಾಹಿತ್ಯಕ್ಕೆ ಕಾಣಿಕೆ ಸಲ್ಲಿಸಿದ್ದಾರೆಂದೂ, ಕನ್ನಡದ ಲಿಪಿ ೧ನೆಯ ಶತಮಾನದ ಹೊತ್ತಿಗೆ ಜಾರಿಯಲ್ಲಿದ್ದರೆ, ತಮಿಳು ಲಿಪಿ ೧೦ನೆಯ ಶತಮಾನದಲ್ಲಿ ಬಳಕೆಗೆ ಬಂತೆಂದು ಸುಪ್ರಸಿದ್ಧ ಇತಿಹಾಸ ತಜ್ಞರಾದ ಡಾ. ಎಸ್. ಶೆಟ್ಟರ್ ಸ್ಪಷ್ಟಪಡಿಸಿದ್ದಾರೆ.

ಸರಿಸರಿ ಪದವಾಗಲಿ, ತೊಲ್‌ಕಾಪ್ಪಿಯಂ ಪದದ ದ್ವಿತೀಯಾಂಶವಾಗಲಿ ಸಂಸ್ಕೃತವೆಂಬುದು ಸ್ಪಷ್ಟ. ತಿರುಕ್ಕುರುಳಿನ ಮೇಲೆ ಸಂಸ್ಕೃತದ ನೀತಿಕಾವ್ಯಗಳ ಪ್ರಭಾವವಿದ್ದೇ ಇದೆ. ಪ್ರಾಚೀನ ಕನ್ನಡ ತಮಿಳಿನ ಮೇಲೆ ಪ್ರಭಾವ ಬೀರಿದೆಯೆಂದು ತಮಿಳಿನ ಶಿಖರಪ್ರಾಯದ ವಿದ್ವಾಂಸರಾದ ಐರಾವತಂ ಮಹಾದೇವನ್ ಸೋದಾಹರಣವಾಗಿ ವಿವರಿಸಿದ್ದಾರೆ. ಕ್ರಿಪೂ. ಎರಡನೆಯ ಶತಮಾನದ ಶಾಸನದಲ್ಲಿ 'ಗವುಡಿ' ಎಂಬ ಕನ್ನಡ ಪದವಿದೆ. ಕ್ರಿಶ. ೨ನೆಯ ಶತಮಾನದ ನಾಡನೂರು ಪಟ್ಟ ಶಾಸನದಲ್ಲಿ 'ಕಂಡಿ' 'ತಾಯಿ' ಪದಗಳಿವೆ. ಮತ್ತೊಂದು ಶಾಸನದಲ್ಲಿ 'ಪೊಸಿಲ್' ಪದವಿದೆ.

ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ದೊರೆತದ್ದು ಕನ್ನಡಿಗರಿಗೆ ಸಂತೋಷದ ವಿಷಯವೇ ಸರಿ. ಬೇರೆ ಭಾಷೆಗಳಿಗೆ ಒಂದೆರಡು ವರ್ಷಗಳ ತನಕ ಶಾಸ್ತ್ರೀಯ ಸ್ಥಾನಮಾನ ನೀಡಕೂಡದೆಂದು ಹೇಳಿದ್ದು ಪ್ರಾಚೀನತೆಗೆ ಒಂದೂವರೆ ಸಾವಿರ ವರ್ಷ ಅವಧಿಯನ್ನು ನಿಗದಿಸಿದ್ದು ಅವರ ಸಂಕುಚಿತ ಮನೋಧರ್ಮಕ್ಕೆ ಸಾಕ್ಷಿಯಾಗಿವೆ. ಕನ್ನಡ ಭಾಷೆ ತಮಿಳಿಗಿಂತ ಪ್ರಾಚೀನವೆಂಬುದು ಲಿಪಿ ಮಾತ್ರದಿಂದಲೇ ಸ್ಪಷ್ಟವಾಗುತ್ತದೆ. ಹಲ್ಮಿಡಿ ಶಾಸನ, ವಡ್ಡಾರಾಧನೆ, ಕವಿರಾಜಮಾರ್ಗಗಳು, ಅವುಗಳಲ್ಲಿ ಉಕ್ತಗೊಂಡಿರುವ ಪೂರ್ವಸೂರಿಗಳು, ಚಂಪೂ ಮೊದಲಾದ ಸಾಹಿತ್ಯ ಪ್ರಕಾರಗಳು ಅಶೋಕನ ಶಾಸನದಲ್ಲಿದ್ದ (ಕ್ರಿಪೂ. ೩ನೆಯ ಶತಮಾನ) ಇಸಿಲಪದ: ಟಾಲೆಮಿ (ಕ್ರಿಶ. ೧೫೦)ಯ ಗ್ರಂಥದಲ್ಲಿ ಬರುವ ಬಾದಾಮಿ ಪುನ್ನಾಟ, ಮುದುಗಲ್ ಮೊದಲಾದ ಕನ್ನಡನಾಡಿನ ಊರ ಹೆಸರುಗಳು; ಆಕ್ಸಿರಿಂಕಸ್ ಪ್ಯಾಪಿರೈ ಎಂಬ ಗ್ರೀಕ್ ಪ್ರಹಸನ (ಕ್ರಿಶ. ೧೫೦)ದಲ್ಲಿ ಬರುವ ಕನ್ನಡದ ಮಾತುಗಳು; ಎರಡನೆಯ ಶತಮಾನದ ಸಪ್ತಶತಿಯಲ್ಲಿರುವ ತುಪ್ಪ, ಪೆಟ್ಟು ಮೊದಲಾದ ಕನ್ನಡದ ಪದಗಳು ಇವು ಕನ್ನಡದ ಪ್ರಾಚೀನತೆಯನ್ನು ಮಾತ್ರವಲ್ಲ ತಮಿಳಿನ ಮೇಲೆ ನಡೆದಿರುವ ಕನ್ನಡದ ಪ್ರಭಾವವನ್ನು ಎತ್ತಿತೋರಿಸುತ್ತವೆ. ಪೋರ್ವೋಕ್ತ ಶಾಸನಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿರುವ ಮಹದೇವನ್ ಅವರ ಹೇಳಿಕೆ ಇದು: – 'ದಿ ಪ್ರೆಸೆಂಟ್ ಸ್ಟಡಿ ಹ್ಯಾಸ್ ಬ್ರಾಟ್ ಟು ಲೈಟ್ ದಿಪ್ಯೆತರ್‌ಟು ಅನ್-ಸಸ್ಪೆಕ್ಟೆಡ್ ಇನ್‌ಫ್ಲೂಯೆನ್ಸ್ ಆಫ್ ಓಲ್ಡ್ ಕನ್ನಡ ಆನ್ ಟ್ಯಾಮಿಳ್ ಬ್ರಾಹಿಮಿ ಇನ್‌ಸ್ಕ್ರಿಪ್ಶನ್ಸ್ ಫ್ರಂ ಅ ಪೀರಿಯಡ್ ಸೆಕೆಂಡ್ ಸೆಂಚ್ಯುರಿ ಬಿಸಿ ಟು ಫೋರತ್ ಸೆಂಚ್ಯುರಿ ಎ.ಡಿ.

ವಾಸ್ತವವಾಗಿ ತಮಿಳು, ಕನ್ನಡಗಳಂತೂ ಅವಳಿ-ಜವಳಿ ಭಾಷೆಗಳು. ಅಂದಮೇಲೆ ಪುರಾತನತೆಯಲ್ಲಿ ಎರಡೂ ಸಮಭಾಷಾ ಸಮೃದ್ಧಿಯಲ್ಲಿ ಕನ್ನಡವೇ ಮಿಗಿಲು. ಕಾರಣ, ತಮಿಳು ವರ್ಣಮಾಲೆ ಅವೈಜ್ಞಾನಿಕವಾದುದು. ಸಾಹಿತ್ಯ ಶಿಲ್ಪ, ಸಂಗೀತ ಕಲೆಗಳಲ್ಲಿ ಕನ್ನಡ ಇಂಡಿಯಾದಲ್ಲಿಯೇ ಅತ್ಯುತ್ತಮವಾದದ್ದು. ವಚನಸಾಹಿತ್ಯ ದಾಸಸಾಹಿತ್ಯಗಳಿಗೆ ಸಮನಾದ

ಸಾಹಿತ್ಯ ಜಗತ್ತಿನಲ್ಲಿಯೇ ಇಲ್ಲ. ಜಗತ್ತಿನ ಸಾಹಿತ್ಯದ ಇತಿಹಾಸದಲ್ಲಿ ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯವೊಂದು ಸುವರ್ಣಯುಗವೆಂದೇ ಹೇಳಬಹುದು. ಸಂಸ್ಕೃತ, ಗ್ರೀಕ್, ಲ್ಯಾಟಿನ್ ಭಾಷೆಗಳ ಹೊರತಾಗಿ ಕನ್ನಡ ಅತ್ಯಂತ ಪ್ರಾಚೀನ ಭಾಷೆ. ಸಮೃದ್ಧಿಯಲ್ಲಿ ಕನ್ನಡ ಸಾಹಿತ್ಯ ಬೇರೆ ಭಾಷೆಗಳ ಸಾಹಿತ್ಯಕ್ಕೆ ಕಡಿಮೆಯಿಲ್ಲ.

ಶಾಸ್ತ್ರೀಯ ಭಾಷೆಯ ಸ್ಥಾನಮಾನಗಳಿಂದ ತಮಿಳಿಗಾಗಿರುವ ಪ್ರಯೋಜನಗಳು:-

೧. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಅದಕ್ಕೆ ಪ್ರತಿಷ್ಠೆ ಮನ್ನಣೆಗಳು ದೊರಕುತ್ತವೆ
೨. ಶ್ರೇಷ್ಠದರ್ಜೆಯ ಅಧ್ಯಯನ ಕೇಂದ್ರ ಸ್ಥಾಪನೆಯಾಗುತ್ತದೆ
೩. ಅಂತರರಾಷ್ಟ್ರೀಯ ಮತ್ತು ರಾಷ್ಟ್ರೀಯ ಪ್ರಶಸ್ತಿಗಳ ಪ್ರದಾನ
೪. ಕೇಂದ್ರೀಯ ವಿಶ್ವವಿದ್ಯಾನಿಲಯಗಳನ್ನೊಳಗೊಂಡಂತೆ ಹಲವು ವಿಶ್ವವಿದ್ಯಾನಿಲಯಗಳಲ್ಲಿ ತಮಿಳು ಅಧ್ಯಯನ ಪೀಠಗಳ ಸ್ಥಾಪನೆ
೫. ತಮಿಳಿನ ಪಾಚೀನ ಗ್ರಂಥ ಸಂಪಾದನೆ, ಮುದ್ರಣ
೬. ಪ್ರಾಚೀನ ತಮಿಳಿನ ಬಗ್ಗೆ ದೃಶ್ಯಚಿತ್ರಗಳ ನಿರ್ಮಾಣ
೭. ಅಂತರ್ಜಾಲ ಬೋಧನಾ ವ್ಯವಸ್ಥೆ
೮. ತೌಲನಿಕ ಅಧ್ಯಯನ
೯. ಸಂಶೋಧನೆಗೆ ಪ್ರಾಶಸ್ತ್ಯ
೧೦. ಭಾಷಾಂತರ
೧೧. ಕಲೆ ವಾಸ್ತುಶಿಲ್ಪ ಪುರಾತತ್ವಗಳ ಅಧ್ಯಯನ ಹಾಗೂ ಸಂಶೋಧನೆ
೧೨. ಭಾಷಾಶಾಸ್ತ್ರದ ಅಧ್ಯಯನ

ಈ ವಿಷಯಗಳ ಜೊತೆಗೆ ಕನ್ನಡ ಇನ್ನು ಕೆಲವು ಯೋಜನೆಗಳನ್ನು ಸೇರಿಸಿಕೊಳ್ಳ ಬೇಕಾಗುತ್ತದೆ. ಸಾಹಿತ್ಯ ರಚನೆಯಿಂದಲೇ ಕನ್ನಡ ಭಾಷೆಯ ಸರ್ವಾಂಗೀಣ ಅಭಿವೃದ್ಧಿ ಸಾಧ್ಯವಿಲ್ಲ. ಸಾಹಿತಿಗಳಿಗೆ ಸಾಕಷ್ಟು ಪ್ರೋತ್ಸಾಹ ನೀಡಬೇಕಾದದ್ದು ಸಹಜ. ಅದರ ಜತೆಗೆ ಸಾಹಿತ್ಯೇತರ ವಿಷಯಗಳ ಕಡೆಗೆ ಗಮನ ಹರಿಸಬೇಕು. ವೈದ್ಯ, ಕೃಷಿ ಇಂಜಿನಿಯರಿಂಗ್, ಭೌತವಿಜ್ಞಾನ, ಜೀವವಿಜ್ಞಾನ ಇವೇ ಮೊದಲಾದ ವೈಜ್ಞಾನಿಕ ವಿಷಯಗಳಲ್ಲಿ ಪ್ರಬುದ್ಧ ಗ್ರಂಥಗಳನ್ನು ರಚಿಸಿದವರಿಗೆ, ಈ ವಿಷಯಗಳಲ್ಲಿ ಕನ್ನಡದ ಮೂಲಕ ಸಂಶೋಧನೆ ನಡೆಸಿದವರಿಗೆ, ಅನುವಾದಕರಿಗೆ ಪ್ರೋತ್ಸಾಹಧನ, ಪ್ರಶಸ್ತಿ, ಬಹುಮಾನ, ವೇತನಗಳನ್ನು ನೀಡಬೇಕು. ಭಾಷಾಂತರಕಾರರು ಜಗತ್ತಿನ ಬೇರೆ ಬೇರೆ ಭಾಷೆಗಳನ್ನು ಕಲಿಯಲು ಪ್ರೋತ್ಸಾಹ ನೀಡಬೇಕು. ಗಡಿಪ್ರದೇಶದ ಜನರಿಗೆ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಬೇಕು. ವಿಜ್ಞಾನ ಗ್ರಂಥಮಾಲೆಗಳ ಪ್ರಕಾಶನಕ್ಕೆ ಸೌಲಭ್ಯಗಳನ್ನು ಕಲ್ಪಿಸಬೇಕು. ಸಾಹಿತ್ಯ ಪರಿಷತ್ತು, ವಿದ್ಯಾವರ್ಧಕ ಸಂಘ, ಕನ್ನಡ ಅಧ್ಯಯನ ಸಂಸ್ಥೆಗಳು ಕನ್ನಡ ವಿಶ್ವವಿದ್ಯಾನಿಲಯ, ರಂಗಾಯಣದಂಥ ಸಂಸ್ಥೆಗಳು ಸಂಶೋಧನೆ ನಡೆಸಲು ಅವಕಾಶ ಕಲ್ಪಿಸಬೇಕು.

ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ದೊರೆತನಂತರ ನನ್ನ ಮನಸ್ಸು ಕಳವಳಕ್ಕೀಡಾಯಿತು. ಕಳವಳಕ್ಕೆ ಕಾರಣ, ತಮಿಳಿನ ಮೇಲಿನ ಮಾತ್ಸರ್ಯವಲ್ಲ; ಅಷ್ಟೇ ಲಕ್ಷಣಗಳುಳ್ಳ ಕನ್ನಡವನ್ನು ಕಡೆಗಣಿಸಿದ್ದು, ಮತ್ತು ಒಂದು ವರ್ಷ ಬೇರಾವ ಭಾಷೆಗೂ ಈ ಸ್ಥಾನಮಾನ ಕೊಡಕೂಡದೆಂದು ಕೇಂದ್ರ ಸರ್ಕಾರವನ್ನು ನಿಯಂತ್ರಿಸಿದ್ದು, ಲೌಕಿಕ ಲಾಭಗಳ

ಪ್ರಶ್ನೆಯಲ್ಲ, ಆತ್ಮಗೌರವದ, ಸ್ವಾಭಿಮಾನದ ಪ್ರಶ್ನೆ. ನವೋದಯಕಾಲದ ಸಾಹಿತಿಗಳು, ಅದರಲ್ಲಿಯೂ ಬಿ.ಎಂ.ಶ್ರೀ. ಮತ್ತು ಕುವೆಂಪು ಅವರು, ಅವರಿಗಿಂತ ಹಿಂದಿದ್ದ ರಾ.ಹ. ದೇಶಪಾಂಡೆಯವರು ಕನ್ನಡಕ್ಕಾಗಿ ನಡೆಸಿದ ಹೋರಾಟದ ನೆನಪು ಜಾಗ್ರತ್, ಸ್ವಪ್ನಾವಸ್ಥೆಗಳಲ್ಲಿ ನನ್ನ ಮನಸ್ಸನ್ನು ಕಲಕುತ್ತಿತ್ತು. ಈ ಸಮಯದಲ್ಲಿ ಅವರು ಬದುಕಿದ್ದರೆ ತೆಪ್ಪಗಿರುತ್ತಿದ್ದರೆ? ಬೀದಿಗಿಳಿಯುತ್ತಿರಲಿಲ್ಲವೆ? ಈಗ ಆ ಬಗ್ಗೆ ಚಿಂತಿಸುವವರನ್ನೇ ಕಾಣೆನಲ್ಲ. ಒಬ್ಬರೂ ಆ ಬಗ್ಗೆ ಸೊಲ್ಲೆತ್ತಲಿಲ್ಲವಲ್ಲ. ಈಗ ನಾವು ನಿಷ್ಕ್ರಿಯರಾದರೆ ಆ ಮಹಾವ್ಯಕ್ತಿಗೆ ದ್ರೋಹ ವೆಸಗಿದಂತಾಗುವುದಿಲ್ಲವೆ? ಭುವನೇಶ್ವರಿಗೆ, ಕನ್ನಡ ಭಾಷಾ ಸಂಸ್ಕೃತಿಗೆ, ಪಂಪ ಬಸವೇಶ್ವರ ಕುಮಾರವ್ಯಾಸಾದಿ ಪೂರ್ವಕವಿಗಳಿಗೆ ಮೋಸ ಮಾಡಿದಂತಾಗುವುದಿಲ್ಲವೆ? ಅವರು ಬಿಟ್ಟುಹೋಗಿರುವ ಆಸ್ತಿಯ ಬಲದಿಂದ ಪ್ರತಾಪವನ್ನು ಮೆರೆಯುತ್ತಿರುವ ನಾವು ಕೃತಘ್ನರಾಗುವುದಿಲ್ಲವೆ? ಇಂಥ ಹಲವಾರು ಪ್ರಶ್ನೆಗಳು ನನ್ನನ್ನು ಕಾಡತೊಡಗಿದವು. ತಮಿಳಿನ ಪರವಾಗಿ ಕೇಂದ್ರ ಸರ್ಕಾರದ ಘೋಷಣೆ ಹೊರಬಿದ್ದು ಒಂದು ವರ್ಷವಾದರೂ ಯಾವ ಸಾಹಿತಿಯಾಗಲಿ, ಶಿಕ್ಷಕನಾಗಲಿ, ರಾಜಕಾರಣಿಯಾಗಲಿ, ಕನ್ನಡ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಗಳಾಗಲಿ, ಚಳುವಳಿಗಾರರಾಗಲಿ ಈ ಬಗ್ಗೆ ಆಸಕ್ತಿ ತೋರಲಿಲ್ಲವಲ್ಲ ಎಂಬ ಚಿಂತೆ ನಿರಂತರವಾಗಿ ಕಾಡತೊಡಗಿತು. ಇನ್ನು ಮೇಲೆ ನಾನು ಸುಮ್ಮನಿರಬಾರದು. 'ದೇಹ ವಯಸ್ಸಾಗಿದೆ; ಶರೀರ ಹಣ್ಣಾಗಿದೆ; ಸತ್ತರೂ ಸರಿಯೆ' ಎಂದು ನಿರ್ಧರಿಸಿ, ದಿ:೩೦-೧೧-೨೦೦೫ರಂದು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಉಪವಾಸಮಾಡಲು ನಿರ್ಧರಿಸಿ ಪತ್ರಿಕೆಗಳಿಗೆ ಆ ಬಗ್ಗೆ ಪ್ರಕಟಣೆ ಕಳಿಸಿದೆ.

ಗೊತ್ತಾದ ದಿನವೂ ಬಂತು. ಎಂ.ಬಿ. ವಿಶ್ವನಾಥ್ ಮೊದಲಾದ ಮಿತ್ರರು ಚಿಟ್ಟೆಚಪ್ಪರ ಆಸನ ವ್ಯವಸ್ಥೆಗಳನ್ನು ನೋಡಿಕೊಂಡರು. ಬೆಳಗ್ಗೆ ೬ ಗಂಟೆಗೆ ಸರಿಯಾಗಿ ನಾನಲ್ಲಿಗೆ ಹೋದೆ. ನನ್ನ ನಿರೀಕ್ಷೆ ಮೀರಿ ಜನ ನೆರೆದರು. ಸಾವಿರಾರು ಮಂದಿ ಬಂದುಹೋದರು. ಸುತ್ತಮುತ್ತ ಪೋಲೀಸರಿದ್ದರು. ವೈದ್ಯರೊಬ್ಬರು ಬಂದು, ನನ್ನ ದೇಹದ ಪರೀಕ್ಷೆ ಮಾಡುವುದಾಗಿ ತಿಳಿಸಿದರು. ಆಗದೆಂದೆ. ಕೆಲವು ಸಾಹಿತಿಗಳು ಮತ್ತು ರಾಜಕಾರಣಿಗಳು ಭಾಷಣ ಮಾಡಿದರು. ಆ ಕಾರ್ಯಕ್ರಮ ನಿರಂತರವಾಗಿ ನಡೆಯುತ್ತಿತ್ತು. ಕೆಲವು ಮಂದಿ ಸೋದರಿಯರು ಹಾಡುತ್ತಿದ್ದರು. ಒಬ್ಬಿಬ್ಬರು ಮಿತ್ರರು ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ಬೇಕಿಲ್ಲವೆಂದು ಗರ್ಜಿಸಿದರು. ಅವರ ಗರ್ಜನೆಯಲ್ಲಿ ತಮ್ಮ ನಾಯಕರ ಪ್ರತಿಧ್ವನಿಯಿತ್ತು. ಹುಬ್ಬಳ್ಳಿಯಿಂದ ಧಾವಿಸಿ ಬಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ. ಚಂದ್ರಶೇಖರ ಪಾಟೀಲರು ಗಂಭೀರವಾಗಿ, ಉತ್ತೇಜನ ಪೂರ್ವಕವಾಗಿ ಭಾಷಣಮಾಡಿ, ಈ ಆಂದೋಲನವನ್ನು ದೇಜಗೌ ಚಳುವಳಿಯೆಂದು ಕರೆಯುವುದಾಗಿ ನುಡಿದು ನನಗೆ ಧೈರ್ಯ ಹೇಳಿದರು. ಶ್ರೀನಿವಾಸ ಪ್ರಸಾದರು ಸಹ ಪ್ರೋತ್ಸಾಹಕರವಾಗಿ ಮಾತನಾಡಿ, ನನ್ನ ಆರೋಗ್ಯದ ದೃಷ್ಟಿಯಿಂದ ಮಧ್ಯಾಹ್ನ ೪ ಗಂಟೆಯ ಹೊತ್ತಿಗೆ ಉಪವಾಸ ಮುಗಿಸಬೇಕೆಂದು ಒತ್ತಾಯಿಸಿದರು.

ಶ್ರೀ ರಾಜಶೇಖರನ್ ಅವರ ವಿಶ್ವಾಸದ ಮಾತಿಗೆ ಮಣಿದು ಆಮರಣಾಂತ ಉಪವಾಸವನ್ನು ನಿಲ್ಲಿಸಿದೆ. ಉಪವಾಸಾನಂತರ ನಾನು ಅನೇಕ ಮಿತ್ರರನ್ನು ಸಂಪರ್ಕಿಸಿ, ಈ ವಿಷಯದಲ್ಲಿ ಕನ್ನಡಿಗರೆಲ್ಲರೂ ಒಟ್ಟಾಗಿ ಚಳುವಳಿ ಹೂಡಬೇಕೆಂದು ವಿನಂತಿಸಿಕೊಂಡೆ. ಅಧಿಕಾರದಲ್ಲಿದ್ದ

ನಾಯಕರಿಗೆ ಅನೇಕ ಪತ್ರಗಳನ್ನು ಬರೆದು, ಸಾಹಿತಿಗಳ ಕೂಗು ಕೇಂದ್ರಕ್ಕೆ ಕೇಳಿಸುವುದಿಲ್ಲ, ನೀವು ಈ ಸಮಸ್ಯೆಯ ಪರಿಹಾರಕ್ಕೆ ಪಣತೊಡಿ, ಇದು ನಾಡಿನ ಭವಿಷ್ಯದ ಪ್ರಶ್ನೆಯೂ ಹೌದು ಎಂದು ತಿಳಿಸಿದೆ.

ಸಂಸತ್ಸದಸ್ಯರ ಪೈಕಿ ಅನಂತಕುಮಾರ್, ಶಿವಣ್ಣ, ವಿಜಯಶಂಕರ್, ಪಾರ್ಲಿಮೆಂಟ್‌ನಲ್ಲಿ ಈ ವಿಷಯ ಎತ್ತಿದ್ದುಂಟು. ಈ ಬಗ್ಗೆ ತುಂಬ ಕಾತರ ವ್ಯಕ್ತಪಡಿಸಿದ್ದಲ್ಲದೆ, ಪ್ರಾಮಾಣಿಕವಾಗಿ, ಸತತವಾಗಿ, ಶ್ರದ್ಧೆಯಿಂದ ದುಡಿದವರೆಂದರೆ ಕೇಂದ್ರ-ರಾಜ್ಯ ಸಚಿವರಾದ ಮಾನ್ಯ ಶ್ರೀ.ಎಂ.ವಿ. ರಾಜಶೇಖರನ್ ಅವರು, ತಮ್ಮ ಆತ್ಮಗೌರವವನ್ನು ಪಣಕ್ಕೊಡ್ಡಿ, ಮಂತ್ರಿಮಂಡಲದ ತಮಿಳು ಸಚಿವರಿಗೆ ಕೈಜೋಡಿಸಿ ಕನ್ನಡಕ್ಕೆ ಅಡ್ಡಬರಬಾರದೆಂದು ವಿನಂತಿ ಮಾಡಿಕೊಂಡಿದ್ದೂ ಉಂಟು.

ಮಾನ್ಯ ಶ್ರೀ ಯಡಿಯೂರಪ್ಪನವರು ಮೊದಲಸಲ ಪ್ರಮಾಣವಚನ ಸ್ವೀಕರಿಸಿದಾಗ, ನಾನವರಲ್ಲಿ ಶಾಸ್ತ್ರೀಯ ಸ್ಥಾನಮಾನದ ಬಗ್ಗೆ ವಿನಂತಿ ಮಾಡಿಕೊಂಡೆ. ಅನಂತರ ಅವರೆಲ್ಲಿ ಹೋದರೂ ಶಾಸ್ತ್ರೀಯ ಸ್ಥಾನಮಾನದ ಮಂತ್ರವನ್ನೇ ಜಪಿಸುತ್ತಿದ್ದರು. ಕೆಲವು ಸಾಹಿತಿಗಳನ್ನು, ಶಾಸಕರನ್ನು ಒಳಗೊಂಡ ನಿಯೋಗವನ್ನವರು ದೆಹಲಿಗೆ ಕರೆದೊಯ್ದರು. ಅನಂತರ ಖರ್ಗೆಯವರೂ ಕೆಲವು ಶಾಸಕರನ್ನು ಕರೆದುಕೊಂಡು ಹೋಗಿ, ಸಂಬಂಧಪಟ್ಟವರಲ್ಲಿ ಈ ವಿಷಯ ಪ್ರಸ್ತಾಪಿಸಿದರಂತೆ. ಶಾಸ್ತ್ರೀಯ ಭಾಷೆಗೆ ಸಂಬಂಧಿಸಿದ ತಜ್ಞಸಮಿಗೆ ಮುಖ್ಯವಾಗಿ ಡಾ. ಉದಯನಾರಾಯಣಸಿಂಗ್ ಅವರಿಗೆ ಕೇಂದ್ರ ಸರ್ಕಾರಕ್ಕೆ ವಂದನೆಗಳನ್ನು ಸಲ್ಲಿಸಬೇಕು. ಕೊನೆಗೆ ಸಾಹಿತಿಗಳು ಹಾಗೂ ಶಾಸಕರೊಡನೆ ರಾಜಘಾಟ್ ಬಳಿ ಧರಣಿ ಹೂಡುವುದಾಗಿ ಯಡಿಯೂರಪ್ಪನವರು ಗುಡುಗುತ್ತಿದ್ದಂತೆ ಕೇಂದ್ರ ಸರ್ಕಾರದ ತೀರ್ಮಾನ ಪ್ರಕಟವಾದದ್ದು ಸಂತೋಷದ ಸಂಗತಿ. ಈ ತೀರ್ಮಾನ ಇತಿಹಾಸದಲ್ಲಿ ಶಾಶ್ವತವಾಗಿ ಉಳಿಯುತ್ತದೆ. ಹೋದಲೆಲ್ಲಾ ಸಾಮಾನ್ಯ ಜನ ಶಾಸ್ತ್ರೀಯ ಸ್ಥಾನಮಾನದ ವಿಚಾರ 'ಏನಾಯಿತೆಂದು' ಕೇಳುತ್ತಿದ್ದರು. ಕನ್ನಡಿಗರೆಲ್ಲರೂ ಈ ಬಗ್ಗೆ ಎಚ್ಚೆತ್ತಿದ್ದರೆಂಬುದಂತು ಸತ್ಯ. ಜನಮನದ ಶಕ್ತಿ ಮೇಣವರಭೀಪ್ಸೆಯು ಮಹಾಸಿದ್ಧಿಗಳಿಗೆ ಕಾರಣವೆಂಬುದನ್ನು ಮರೆಯಲಾಗದು. ಕಳೆದ ಒಂದು ಶತಮಾನದಿಂದಲೂ ಕನ್ನಡಕ್ಕಾಗಿ ಹೋರಾಡಿದ ಬಿ.ಎಂ.ಶ್ರೀ, ಕುವೆಂಪು, ದೇಶಪಾಂಡೆ, ಆಲೂರು ವೆಂಕಟರಾವ್, ಚೆನ್ನಬಸಪ್ಪ ಮೊದಲಾದವರಿಗೆ ಕನ್ನಡದ ಪ್ರಾಚೀನತೆಯ ಬಗ್ಗೆ ಸಂಶೋಧನೆ ನಡೆಸಿದ ಫಾದರ್‌ಹೆರಾಸ್, ಕಿಟ್ಟೆಲ್, ರೈಸ್, ರಾ. ನರಸಿಂಹಾಚಾರ್, ವೆಂಕಟಸುಬ್ಬಯ್ಯ, ಗೋವಿಂದಪೈ, ಡಿ.ಎಲ್.ಎನ್, ತೀ.ನಂ.ಶ್ರೀ, ಶ್ರೀಕಂಠಶಾಸ್ತ್ರೀ, ಎಂ.ಎಚ್. ಕೃಷ್ಣ, ಹಳಕಟ್ಟಿ, ಹಿರೇಮಠ, ಕಲ್ಬುರ್ಗಿ, ವೆಂಕಟಾಚಲಶಾಸ್ತ್ರೀ, ಚಿದಾನಂದಮೂರ್ತಿ, ಶೇಷಗಿರಿರಾವ್, ತಾರಾನಾಥ್, ಆರ್‌ಪಿಎಸ್ ಸುಂದರಂ, ಹಂಪನಾ, ಲಿಂಗದೇವರು ಹಳೇಮನೆ, ಮುಂತಾದವರಿಗೆ ಕವಿಋಷಿ ಸಂತರಿಗೆ ನಾಡು ನುಡಿಗಳ ನಿಜಭಕ್ತರಾದ ರಾಜಕೀಯ ನಾಯಕರಿಗೆ ಈ ವಿಜಯೋತ್ಸವ ಸಂದರ್ಭದಲ್ಲಿ ನಮನ ಸಲ್ಲಿಸುತ್ತ, ನಾಡುನುಡಿಗಳಿಗೆ ಧಕ್ಕೆಯೊದಗಿದಾಗ, ಕೇಂದ್ರ ಸರ್ಕಾರದಿಂದ ತಾರತಮ್ಯ ನೀತಿ ತಲೆದೋರಿದಾಗ, ಕನ್ನಡಿಗರೆಲ್ಲರೂ ಸಂಕುಚಿತ ಭಾವನೆಗಳನ್ನು ತೊರೆದು ಒಂದಾಗಿ ಸರ್ವತ್ಯಾಗಕ್ಕೂ ಸಿದ್ಧರಾಗಬೇಕೆಂದು ಹಾರೈಸುತ್ತ, ಸಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಬಾಳ್ಗೆ ಎಂದು ಪ್ರಾರ್ಥಿಸುತ್ತೇನೆ.

❐

# ಶಾಸ್ತ್ರೀಯ ಭಾಷೆಯ ಸ್ಥಾನಮಾನ : ಮುಂದೇನು?

● *ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ*

ಕನ್ನಡಕ್ಕೆ 'ಶಾಸ್ತ್ರೀಯ ಭಾಷೆ'ಯ ಸ್ಥಾನಮಾನಗಳು ದೊರೆತವು ಎನ್ನುವುದು ಆ ಸಂಬಂಧವಾಗಿ ನಡೆದ ಹೋರಾಟಗಳ ದೃಷ್ಟಿಯಿಂದ ನೆಮ್ಮದಿಯ ಸಂಗತಿ. ಕೇಂದ್ರ ಸರಕಾರದಿಂದ ಅಧಿಕೃತವಾದ ಆದೇಶ ಇನ್ನೂ ಬರಬೇಕಾಗಿದೆ. ಅದು ಬಂದ ಮೇಲೆ, ಈಗಾಗಲೇ ತಮಿಳು ಭಾಷೆಗೆ ಹಾಕಿಕೊಂಡಿರುವ ಯೋಜನೆಗಳ ರೂಪುರೇಷೆಗಳು ಮತ್ತು ಕೈಗೊಂಡಿರುವ ಕಾರ್ಯಕ್ರಮಗಳನ್ನು ವಿವರವಾಗಿ ಪರಿಶೀಲಿಸಿ ನಮ್ಮ ಅಗತ್ಯ, ಅವಕಾಶ ಆದ್ಯತೆಗಳಿಗೆ ಅನುಸಾರವಾಗಿ ನಾವು ಸ್ವತಂತ್ರವಾಗಿ ವಿಚಾರ ಮಾಡಿ ನಮ್ಮ ಯೋಜನೆಗಳ ಸ್ವರೂಪವನ್ನು ಗೊತ್ತುಮಾಡಿಕೊಳ್ಳಬಹುದು. ಕಾರ್ಯಕ್ರಮಗಳನ್ನು ಕೈಗೊಳ್ಳಬಹುದು. ಈ ಸಂಬಂಧದಲ್ಲಿ ಕರ್ನಾಟಕದಲ್ಲಿ ಭಾಷೆ ಸಾಹಿತ್ಯಗಳು, ಸಂಸ್ಕೃತಿ ಇತಿಹಾಸಗಳು ಇವುಗಳ ಸಂವರ್ಧನೆಗೆ ಕೆಲಸ ಮಾಡುತ್ತಿರುವ ವಿಶ್ವವಿದ್ಯಾನಿಲಯಗಳೂ ಸೇರಿದಂತೆ ಎಲ್ಲಾ ಸರಕಾರಿ ಮತ್ತು ಖಾಸಗಿ ಸಂಘ-ಸಂಸ್ಥೆಗಳು ಅವುಗಳ ಶಕ್ತಿ, ಅರ್ಹತೆಗಳ ಮೇಲೆ ಅನುದಾನ ಪಡೆದು ಕನ್ನಡದ ಮುನ್ನಡೆಗೆ ಶ್ರಮಿಸಬಹುದಾಗಿದೆ. ಹೀಗೆ ಶ್ರಮಿಸುವಾಗ ಕೆಲಸಗಳು ಕಳಪೆಯಾಗದಂತೆ, ಪುನರಾವೃತ್ತಿ ಮಾಡುವ ಕೆಲಸಗಳಲ್ಲಿ ಅನುದಾನದ ಅಪವ್ಯಯವಾಗದಂತೆ ನೋಡಿಕೊಳ್ಳ ಬೇಕಾದದ್ದು ಸಂಬಂಧಪಟ್ಟವರ ಜವಾಬ್ದಾರಿ.

'ಶಾಸ್ತ್ರೀಯ ಭಾಷೆ'ಯ ಸಂಬಂಧದಲ್ಲಿ ಈಗಾಗಲೇ ಆಗಿರುವ ಕೆಲಸಕ್ಕಿಂತ ಆಗಬೇಕಾಗಿರುವ ಕೆಲಸವೇ ಹೆಚ್ಚು. ಕನಿಷ್ಠ ಪಕ್ಷ

೧೦೦-೧೫೦ ವರ್ಷಗಳಿಗೆ ಸಾಕಾಗುವಷ್ಟು ಕೆಲಸ ಯೋಜಕರಿಗಾಗಿ, ಸಂಶೋಧಕ ವಿದ್ವಾಂಸರಿಗಾಗಿ ಕಾಯುತ್ತಿದೆ. ಶಾಸ್ತ್ರೀಯ ಭಾಷೆ-ಸಾಹಿತ್ಯ ಎಂಬ ಮಾತುಗಳು ನಮ್ಮ ಹಳೆಯ ಭಾಷೆ-ಸಾಹಿತ್ಯಗಳ ಸತ್ತ್ವ ಸ್ವರೂಪಗಳನ್ನು ಸಮರ್ಪಕವಾಗಿ ಇಂಗಿತಗೊಳಿಸುವುದಿಲ್ಲ

ಎಂದು ಭಾವಿಸಿ, ಈಚೆಗೆ ಬೇರೆ ಬೇರೆ ಸಲಹೆಗಳು ಸೂಚಿತವಾಗುತ್ತಿವೆ. ಇವುಗಳಲ್ಲಿ ಕೆಲವು ಹಳೆಯ ಅಂಗೀಕೃತ ಗ್ರಹಿಕೆಗಳನ್ನು ಪುನರುಜ್ಜೀವಿಸುವಂಥವು. ಈ ಎರಡರಲ್ಲಿಯೂ ಅವ್ಯಾಪ್ತಿ, ಅತಿವ್ಯಾಪ್ತಿ, ಅನ್ಯಥಾ ವ್ಯಾಪ್ತಿಗಳಿಗೆ ಅವಕಾಶವುಂಟೆಂದು ಯಾರಾದರೂ ವಾದಿಸಬಹುದು. ಉದಾ: ಪ್ರಚಾರದಲ್ಲಿರುವ 'ಶಾಸ್ತ್ರೀಯ ಭಾಷೆ' ಎಂಬ ಮಾತನ್ನೇ ತೆಗೆದುಕೊಳ್ಳೋಣ. ನೃತ್ಯ ಸಂಗೀತಗಳು ಅವುಗಳ ಶಾಸ್ತ್ರಗ್ರಂಥಗಳಲ್ಲಿ ಉಕ್ತವಾದ ಲಕ್ಷಣಗಳಿಗೆ ಅನುಸಾರವಾಗಿದ್ದಾಗ ಶಾಸ್ತ್ರೀಯ ನೃತ್ಯ, ಶಾಸ್ತ್ರೀಯ ಸಂಗೀತ ಎಂದಾಗುತ್ತದೆ. ಆದರೆ ಶಾಸ್ತ್ರೀಯ ಭಾಷೆಯ, ಸಾಹಿತ್ಯದ ವಿಷಯದಲ್ಲಿ ಅದು ಹಾಗಲ್ಲ. ಇಲ್ಲಿ ವ್ಯಾಕರಣಾದಿ ಶಾಸ್ತ್ರಗಳ ಲಕ್ಷಣಾಂಶಗಳ ವಿವಕ್ಷೆಗಿಂತ ಬೇರೆ ಕಾವ್ಯಗುಣಗಳು, ಸತ್ತ್ವ ಸ್ವರೂಪಗಳು ಮುಖ್ಯವಾದವು. ಇನ್ನು ಪರಂಪರೆ ಮೂಲವಾಗಿ ಕಲ್ಪಿಸಲಾಗುವ ಪಾರಂಪರಿಕ ಭಾಷೆ, ಸಾಹಿತ್ಯ ಎಂಬ ಮಾತುಗಳು. ಪರಂಪರೆ ಎನ್ನುವುದು tradition/haritage ಎಂಬ ಅರ್ಥವುಳ್ಳದ್ದು. ಕ್ಲಾಸಿಕಲ್ ಎಂಬ ಅರ್ಥವುಳ್ಳದ್ದಲ್ಲ ಎಂಬುದಾಗಿ ಯಾರಾದರೂ ವಾದಿಸಬಹುದು. ಹಳಗನ್ನಡ ಭಾಷೆಯಲ್ಲಿರುವ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳ ಸಮುಚ್ಚಯವನ್ನು ಮಾರ್ಗ ಸಾಹಿತ್ಯ, ಅಭಿಜಾತ ಸಾಹಿತ್ಯ ಎಂಬುದಾಗಿ ಕರೆಯುವ ರೂಢಿ ಎಂದಿನಿಂದಲೂ ಇದೆ. ಇವೆರಡೂ ಸಮಾನ ಆಶಯಗಳುಳ್ಳವು. ಮುಖ್ಯವಾಗಿ ಶ್ರೇಷ್ಠತೆ, ಘನತೆ, ಸೌಂದರ್ಯ, ಪ್ರೌಢಿಮೆ ಮೊದಲಾದ ಲಕ್ಷಣಗಳು ಯಾವ ಹಳೆಯ ಸಾಹಿತ್ಯದಲ್ಲಿ ಸೃಷ್ಟಿಮೂಲದಲ್ಲಿಯೇ ಕಂಡುಬರುತ್ತದೆಯೋ, ಸಂಪದ್ಯುಕ್ತವಾಗಿ ವ್ಯಾಪಿಸಿದೆಯೋ ಆ ಸಾಹಿತ್ಯ ಮಾರ್ಗ ಸಾಹಿತ್ಯ, ಅಭಿಜಾತ ಸಾಹಿತ್ಯ ಎನಿಸುತ್ತದೆ ಎಂದು ಹೇಳಬಹುದಾಗಿದೆ. ಆದರೆ ಈಗ ಈ ಎರಡೂ ಪದಗಳು ಅಂಥ ಪ್ರಚಾರದಲ್ಲಿಲ್ಲ. ಅಲ್ಲದೆ, ಅವು ಪಂಡಿತ ಪ್ರಯೋಗದಂತೆ ಕಾಣುತ್ತವೆ. ಕನ್ನಡದ ಶಾಸನ ಸಾಹಿತ್ಯವನ್ನೂ ಒಳಗೊಂಡ ಹಾಗೆ, ಈಗ ವರ್ತಮಾನ ಸನ್ನಿವೇಶದಲ್ಲಿ ಆಧುನಿಕ–ಪೂರ್ವಕಾಲದ ಕನ್ನಡ ಸಾಹಿತ್ಯವನ್ನು 'ಪ್ರಾಚೀನ ಸಾಹಿತ್ಯ' ಎಂಬುದಾಗಿ ಎಲ್ಲರಿಗೂ ತಿಳಿಯುವ ಹಾಗೆ ಕರೆದು, ನಮ್ಮ ಯೋಜನೆಗಳನ್ನು 'ಪ್ರಾಚೀನ ಕನ್ನಡ ಭಾಷೆ ಸಾಹಿತ್ಯ, ಸಂಸ್ಕೃತಿ ಅಧ್ಯಯನಗಳು' ಎಂಬುದಾಗಿ ನಿರ್ದೇಶಿಸಬಹುದಲ್ಲವೆ?

ನಮ್ಮ ಅಧ್ಯಯನ ಸಂಶೋಧನೆಗಳ ವ್ಯಾಪ್ತಿ ಸುಲಭವಾಗಿ ಕ್ರಿ.ಶ.ದ ಆರಂಭದಿಂದ (ಅಥವಾ ಕ್ರಿ.ಶ. ೪೫೦ರ ಹಲ್ಮಿಡಿ ಶಾಸನ ಕಾಲದಿಂದ) ಕ್ರಿ.ಶ. ೧೭೫೦ರ ವರೆಗೆ (ಸು. ೧೫೦೦ ವರ್ಷ), ಎಂದರೆ ಎಲ್ಲಿಯವರೆಗೆ ಹಳಗನ್ನಡದ ಚಂಪೂ ಕಾವ್ಯಗಳು ನಡುಗನ್ನಡದ ಷಟ್ಪದಿ ಮತ್ತು ಸಾಂಗತ್ಯ ಕಾವ್ಯಗಳೂ ಅವಿರತಧಾರೆಯಾಗಿ ರಚಿತವಾಗತೊಡಗಿದವೋ ಅಲ್ಲಿಯವರೆಗೆ, ವಿಸ್ತಾರಗೊಳ್ಳಲು ಅವಕಾಶವಾಗುತ್ತದೆ. ವಾಸ್ತವವಾಗಿ, ಕರ್ನಾಟಕ ಕವಿಚರಿತೆಕಾರರು ಮೊದಲುಗೊಂಡು ಈಚಿನ ಸಾಹಿತ್ಯ ಚರಿತ್ರೆಕಾರರೆಲ್ಲ ಪ್ರಾಚೀನ ಕನ್ನಡ ಸಾಹಿತ್ಯದ ಗಡಿರೇಖೆಯನ್ನು ಸು. ೧೭೫೦ ಎಂಬುದಾಗಿ ಗುರುತಿಸುವ ಸಾಮಾನ್ಯವಾದ ಪರಿಪಾಠವಿದೆ. ಕನ್ನಡ ಭಾಷೆ ಸಾಹಿತ್ಯಗಳ ವ್ಯವಸಾಯದಲ್ಲಿಯೂ ಅಧ್ಯಯನಗಳಲ್ಲಿಯೂ ಇನ್ನೂ ಐರೋಪ್ಯ ಪ್ರಭಾವ, ವಿಶೇಷವಗಿ ಇಂಗ್ಲೀಷ್ ಭಾಷೆ ಸಾಹಿತ್ಯಗಳ ಪ್ರಭಾವ ಕಾಣದಿರುವ ಅವಧಿ ಅದು.

ಹೀಗೆ ಅಧ್ಯಯನ ಶೋಧನೆಗಳಿಗೆ ಕಾಲಘಟ್ಟವನ್ನು ಗುರುತಿಸಿಕೊಳ್ಳುವುದರಲ್ಲಿ ವಿಶೇಷವಾದ

ಅನುಕೂಲಗಳಿವೆ, ಪ್ರಯೋಜನಗಳೂ ಇವೆ. ಇದರಿಂದ ನಡುಗನ್ನಡ ಕಾಲದ ವಚನಕಾರರೂ, ಹರಿದಾಸರೂ, ಕುಮಾರವ್ಯಾಸ ಮೊದಲಾದ ಭಾಗವತ ಕವಿಗಳೂ, ರತ್ನಾಕರವರ್ಣಿ ನಂಜುಂಡಕವಿ, ಮಂಗರಸರಂಥ ಪ್ರಸಿದ್ಧ ಸಾಂಗತ್ಯಕಾರರೂ ಸೇರ್ಪಡೆಯಾಗುತ್ತಾರೆ. ಪ್ರಾಚೀನ ಕನ್ನಡ ಸಾಹಿತ್ಯದ ಮಹಾಕವಿಗಳ ಪಂಕ್ತಿಯಲ್ಲಿ ಪಂಪ, ಕುಮಾರವ್ಯಾಸರೊಂದಿಗೆ ರತ್ನಾಕರವರ್ಣಿ, ನಂಜುಂಡ ಕವಿಗಳನ್ನೂ ಸೇರಿಸುವ ರೂಢಿಯಿದೆಯೆಂಬುದನ್ನಿಲ್ಲಿ ವಿಶೇಷವಾಗಿ ನೆನೆಯಬೇಕು. ಈ ಕವಿಗಳ ಸಂಬಂಧವಾಗಿ ಕೆಲಸಗಳೂ ಹೆಚ್ಚಾಗಿ ನಡೆದಿಲ್ಲ.

ಪ್ರಾಚೀನ ಕನ್ನಡ ಸಾಹಿತ್ಯವೂ ಚಂಪೂಕಾವ್ಯಗಳ ಉತ್ಕರ್ಷೆಯೂ ಮುಗಿದು ಹೋಯಿತೆಂಬ ೧೪ನೆಯ ಶತಮಾನಕ್ಕೆ ಅವಧಿ ಸೀಮಿತಗೊಂಡರೆ, ಆ ಮುಂದಿನ ಅವಧಿಯಲ್ಲಿ ರಚಿತವಾಗಿ ಇನ್ನೂ ಹಸ್ತಪ್ರತಿಗಳಲ್ಲಿಯೇ ಹುದುಗಿ ಕುಳಿತಿರುವ ನೂರಾರು ಅಪ್ರಕಟಿತ, ಅಸಂಶೋಧಿತ ಶ್ರೇಷ್ಠ ಗ್ರಂಥಗಳು ಶಾಶ್ವತವಾಗಿ ಅಪರಿಚಿತವಾಗಿಯೇ ಉಳಿದುಹೋಗಿ ಉಪೇಕ್ಷೆಗೆ ಗುರಿಯಾಗುವ ಅಪಾಯವಿದೆ. ಆಗ ಸಾವಿರ ಸಾವಿರಗಟ್ಟಲೇ ಪದ್ಯಗಳಿರುವ ಎಷ್ಟೋ ಚಂಪೂಕಾವ್ಯಗಳು, ಷಟ್ಪದಿ ಮತ್ತು ಸಾಂಗತ್ಯ ಕಾವ್ಯಗಳೂ, ಸಾವಿರಗಟ್ಟಲೆ ಸಾಲುಗಳಿರುವ ಪ್ರಾಚೀನ ಗದ್ಯ ಗ್ರಂಥಗಳೂ ಬೆಳಕು ಕಾಣದೆ ಹೋಗುತ್ತವೆ. ಉದಾ: ಚಿಕ್ಕದೇವರಾಜ ಒಡೆಯ (೧೬೭೨-೧೭೦೪) ಆಳ್ವಿಕೆಯ ಅವಧಿಯಲ್ಲಿ ಸುಮಾರು ಇಪ್ಪತ್ತಾದರೂ ದೊಡ್ಡ ಪ್ರಮಾಣದ ಚಂಪೂ ಕಾವ್ಯಗಳು ರಚಿತವಾಗಿದ್ದು, ಇವುಗಳಲ್ಲಿ ಎಲ್ಲವೂ ಪ್ರಕಟವಾಗಿರುವಂತೆ ತೋರುವುದಿಲ್ಲ. ಹಾಗೆಯೇ ಉಳಿದ ಪ್ರಕಾರದವು ಕೂಡ.

ಅಗತ್ಯವಾಗಿ, ತುರ್ತಾಗಿ ಬೆಳಕುಕಾಣಬೇಕಾಗಿರುವ, ಅಧ್ಯಯನಗಳು ನಡೆಯಬೇಕಾಗಿರುವ ಗ್ರಂಥರಾಶಿಯಲ್ಲಿ ಕಾವ್ಯಗಳೂ ಪುರಾಣಗಳೂ ಇರುವ ವಿಚಾರವಿರಲಿ; ಕ್ಷೇತ್ರದ ಮಹಾತ್ಮ್ಯೆಗಳಿವೆ. ರಾಜ್ಯದ ಇತಿಹಾಸ ಗ್ರಂಥಗಳಿವೆ, ಭಾಷಾವಿಷಯಕ ಚಮತ್ಕಾರ ಗ್ರಂಥಗಳಿವೆ, ಲೋಕೋಪಕಾರ ಗಳಾದ ಗಣಿತಶಾಸ್ತ್ರ ಖಡ್ಗಶಾಸ್ತ್ರ ರತ್ನಶಾಸ್ತ್ರ ವೈದ್ಯಶಾಸ್ತ್ರ ವೃಷ್ಟಿಶಾಸ್ತ್ರ ರಸವೈದ್ಯ, ಸೂಪವಿದ್ಯೆ ಮೊದಲಾದ ಶಾಸ್ತ್ರ ವಿಷಯದ ಅಮೂಲ್ಯವಾದ ರಚನೆಗಳಿವೆ. ದಿಟವಾಗಿ ಈ ಶಾಸ್ತ್ರಗ್ರಂಥಗಳು ಸರಳವಾದ ಹೊಸಗನ್ನಡದಲ್ಲಿ, ಇಂಗ್ಲೀಷ್ ಭಾಷಾಂತರಗಳಲ್ಲಿ ಈಗ ಪ್ರಚಾರಕ್ಕೆ ಬರಬೇಕಾಗಿವೆ. ಇವೆಲ್ಲ ಕರ್ನಾಟಕದ ಸಮಾಜ ಸಂಸ್ಕೃತಿಗಳ, ಧರ್ಮ ಇತಿಹಾಸಗಳ ಹೆಚ್ಚಿನ ತಿಳಿವಳಿಕೆಗೆ ಸಹಾಯ ಮಾಡುವಂಥವು, ತಪ್ಪು ತಡೆಗಳನ್ನು ಕಳೆಯುವಂಥವು. ಇನ್ನು ಪ್ರಾಚೀನ ಗದ್ಯದ ಸ್ವರೂಪವಂತೂ ಅಪ್ರಕಟಿತ ಗದ್ಯ ಗ್ರಂಥಗಳು ಪೂರ್ಣವಾಗಿ ಪ್ರಕಟಗೊಂಡಿಲ್ಲದೆ, ಅಧ್ಯಯನಗಳಿಗೆ ಒಳಪಟ್ಟಿಲ್ಲದೆ ವಿಶದವಾಗುವಂತಿಲ್ಲ. ಹಳೆಯ ಶಾಸನಗಳ, ಹಸ್ತಪ್ರತಿಗಳ ಲಿಪಿಗಳನ್ನು ಪರಿಚಯಿಸಿದಲ್ಲದೆ ಇದು ಶಕ್ಯವಿಲ್ಲ.

ನಾಡು ನುಡಿಗಳ ಚರಿತ್ರೆಗೆ ಶಾಸನಗಳೇ ಮೂಲ ಸಾಮಗ್ರಿ, ಇವುಗಳ ಅಭ್ಯಾಸ ವಿವಿಧ ಮುಖಗಳಲ್ಲಿ, ವ್ಯವಸ್ಥಿತ ಕ್ರಮಗಳಲ್ಲಿ ಇನ್ನೂ ನಡೆಯಬೇಕಾದ್ದು. ಈಗಾಗಲೇ ಮೂಲ ಪಠ್ಯಗಳು ಶಿಲೆಯಿಂದ, ಲೋಹಪಟಗಳಿಂದ ಕಾಗದಕ್ಕೆ ಇಳಿದು ಆಗಿದೆ. ಇವು ಈಗಿನ 'ಕಚ್ಚಾರೂಪ'ದಲ್ಲಿ ಅಲ್ಲದೆ, ಕವಿಲಿಖಿತವಾದ ಶುದ್ಧ, ಛಂದೋಬದ್ಧ ರೂಪಗಳಿಗೆ ಪರಿವರ್ತಿತವಾಗಿ ಅಭ್ಯಾಸಕ್ಕೆ ಒದಗಬೇಕಾಗಿದೆ. ಇತಿಹಾಸ, ಸಮಾಜ, ಸಂಸ್ಕೃತಿಗಳ ಪುನಾರಚನೆಗೆ ಅವುಗಳ ಪ್ರಯೋಜನ ಪಡೆಯುವುದು ಹಾಗಿರಲಿ, ಅವುಗಳ ಬಾಷೆ, ಶೈಲಿ, ಛಂದಸ್ಸು, ಕವಿಗಳು,

ವಿಶಿಷ್ಟ ಶಬ್ದಗಳು, ಸಂದರ್ಭಗಳು ಅಭ್ಯಾಸಕ್ಕೆ ಕಾದುಕೊಂಡಿವೆ. ಸಂಕಲನಗ್ರಂಥಗಳು ರಾಜಮನೆತನಗಳಿಗೆ ಸಂಬಂಧಿಸಿದ ಹಾಗೆ (Corpus) ರೂಪದಲ್ಲಿ ಶುದ್ಧವಾಗಿ ಸಂಪಾದಿತವಾಗಿ ಬರಬೇಕಾಗಿವೆ. ನಾಡು ನುಡಿಗಳ ಪರಂಪರೆಗೆ ಅವುಗಳ ಕೊಡುಗೆ ಇನ್ನೂ ಸ್ಪಷ್ಟಪಡಬೇಕಾಗಿದೆ. ಶಾಸನ ಪಾಠಗಳ ಹೊಸಗನ್ನಡ ರೂಪಗಳೂ, ಇಂಗ್ಲೀಷ್ ಭಾಷಾಂತರಗಳೂ ಬರಬೇಕಾಗಿವೆ. ಉಲ್ಲೇಖಗೊಂಡ ಸ್ಥಳನಾಮ ವ್ಯಕ್ತಿನಾಮಗಳ ವಿಶ್ಲೇಷಣೆಗಳಾಗಬೇಕಾಗಿವೆ.

ಅಳಿದ ಮೇಲೆ, ಈಗ ಉಳಿದುಕೊಂಡಿರುವ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಕ್ರೋಢೀಕೃತ ಸೂಚಿನಿರ್ಮಾಣ ಇವು ತ್ವರಿತಗೊಂಡು ಮುಗಿಯುತ್ತಿದ್ದ ಹಾಗೆಯೇ ಒಂದೊಂದೂ ಗ್ರಂಥದ ಸಂಪಾದಿತ ಕೃತಿ ಸಿದ್ಧವಾಗಿ ಪ್ರಕಟವಾಗಬೇಕಾಗಿದೆ. ಇನ್ನೂ ಪ್ರಕಟವಾಗಿರದ ನೂರಾರು ಹಸ್ತಪ್ರತಿಗಳಿವೆ. ಪ್ರಾಚೀನ ಕನ್ನಡ ಸಾಹಿತ್ಯದ ಸಮಗ್ರ ವಿವರಣಾತ್ಮಕ ಸೂಚಿ ಹಲವು ಸಂಪುಟಗಳಲ್ಲಿ ಸಿದ್ಧವಾಗಬೇಕಾಗಿದೆ. ಇವುಗಳಲ್ಲಿ ಮುದ್ರಿತ, ಅಮುದ್ರಿತ ಮತ್ತು ಹಸ್ತಪ್ರತಿ ಲಭ್ಯತೆ ಇವುಗಳ ಮಾಹಿತಿ ಇರಬೇಕಾಗುವುದು. ಆದ್ಯತೆಯೊಂದಿಗೆ ಆಗಬೇಕಾಗಿರುವ ಕೆಲಸವೆಂದರೆ ಲೋಕೋಪಕಾರಕಗಳಾದ ಶಾಸ್ತ್ರಗ್ರಂಥಗಳ ಸಂಪಾದನೆ ಮತ್ತು ಅವಕ್ಕೆ ಹೊಸಗನ್ನಡ ಮತ್ತು ಇಂಗ್ಲೀಷ್ ಅನುವಾದಗಳು. ಪ್ರಸಿದ್ಧವಾದ ಪ್ರಾಚೀನ ಸಾಹಿತ್ಯಕೃತಿಗಳ (ಉದಾ: ಪಂಪಭಾರತ, ಕುಮಾರವ್ಯಾಸ ಭಾರತ, ಜೈಮಿನಿಭಾರತ, ಕವಿರಾಜಮಾರ್ಗ, ಶಬ್ದಮಣಿದರ್ಪಣ ಛಂದೋಂಬುಧಿ ಇ.) ಸವಿಮರ್ಶ ಪರಿಷ್ಕರಣಗಳ ಸಿದ್ಧತೆ. ಶತಶತಮಾನಗಳ ಕನ್ನಡ ಭಾಷೆಯ ಬೆಳವಣಿಗೆಯನ್ನು ವರ್ಣನಾತ್ಮಕ, ಇತಿಹಾಸ ಹಾಗೂ ತುಲನಾತ್ಮಕ ನೆಲೆಗಳಲ್ಲಿ ವಿವರವಾಗಿ ನಿರೂಪಿಸುವುದು; ಎಂದರೆ ಕನ್ನಡ ಭಾಷೆಯ ಸಮಗ್ರ ಚರಿತ್ರೆ, ಗ್ರಂಥ, ಸ್ಥಳನಾಮ, ವ್ಯಕ್ತಿನಾಮಗಳ ಭಾಷಿಕ ಮತ್ತು ಸಾಂಸ್ಕೃತಿಕ ವಿಶ್ಲೇಷಣೆ. ಶಾಸನ ಸಾಹಿತ್ಯ ಮತ್ತು ಪ್ರಾಚೀನ ಕನ್ನಡ ಸಾಹಿತ್ಯ ಇವನ್ನು ಆಧರಿಸಿ ಒಂದು ವಿಸ್ತೃತ ಪ್ರಮಾಣದ ಸಾಂಸ್ಕೃತಿಕ ಪದಕೋಶವನ್ನು ೨ ಅಥವಾ ೩ ಸಂಪುಟಗಳಲ್ಲಿ ಸಿದ್ಧಮಾಡಬೇಕು; ಅದು ವಿಶ್ವಕೋಶವೂ ಆಗಬಹುದು.

ಶಾಸನಗಳು ಮತ್ತು ಪ್ರಾಚೀನ ಕನ್ನಡ ಸಾಹಿತ್ಯಗಳನ್ನು ಆಧರಿಸಿ ಗಾದೆಗಳು, ಒಗಟುಗಳು, ಜನಪದರ ಆಚಾರ-ವಿಚಾರಗಳು ಮೊದಲಾದವುಗಳ ನಿರೂಪಣೆ, ಪ್ರಾಚೀನ ಕನ್ನಡ ಸಾಹಿತ್ಯದ ಚಳುವಳಿಗಳು ಮತ್ತು ಕರ್ನಾಟಕ ಸಂಸ್ಕೃತಿ ಚಲನವಲನಗಳು. ಸಾಹಿತ್ಯಿಕವಾಗಿ ಸಂಸ್ಕೃತ ಪ್ರಾಕೃತ ಅಪಭ್ರಂಶ ಭಾಷೆಗಳೊಂದಿಗೆ ಕನ್ನಡದ, ಅನ್ಯದ್ರಾವಿಡಭಾಷೆಗಳೊಂದಿಗೆ ಕನ್ನಡದ ತುಲನಾತ್ಮಕ ಅಧ್ಯಯನ, ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಧಾರ್ಮಿಕ ಪಂಗಡಗಳ, ಸಂಪ್ರದಾಯಗಳ ಒಳಪ್ರವಾಹಗಳು, ವಿವರಗಳು, ಕನ್ನಡ ಭಾಷೆ ಸಾಹಿತ್ಯಗಳ ಪ್ರಾಚೀನತೆಯ ಇತಿಹಾಸದ ವಿಸ್ತೃತ ವಿವೇಚನೆ. ಶಾಸನ ಸಾಹಿತ್ಯ-ಪ್ರಾಚೀನ ಸಾಹಿತ್ಯಗಳ ಕ್ಷೇತ್ರದಲ್ಲಿ ಕೆಲಸ ಮಾಡಿದ ಗಣ್ಯ ವಿದ್ವಾಂಸರ, ಸಂಶೋಧಕರ ಜೀವನಚರಿತ್ರೆಗಳು ಮತ್ತು ಸಾಧನೆಯ ಇತಿಹಾಸ ಇತ್ಯಾದಿ ಮಾಡಬಹುದಾದ ಕೆಲಸ ಬೆಟ್ಟದಷ್ಟಿದೆ.

ಈಚೆಗೆ ವಿಶ್ವವಿದ್ಯಾನಿಲಯಗಳೂ ಸಾಹಿತ್ಯ ಪರಿಷತ್ತು, ಅಕಾಡೆಮಿಗಳೂ ಅಭಿಜಾತ ಸಾಹಿತ್ಯದ ಅಧ್ಯಯನಗಳಿಗೆ ಪೋಷಕವಾದ ಪ್ರೋತ್ಸಾಹಕವಾದ ವಾತಾವರಣವನ್ನು ನಿರ್ಮಿಸುತ್ತಿಲ್ಲ ಎಂಬ ಮಾತು ಕೇಳಿಬರುತ್ತಿದೆ. ಹೀಗಾಗಿ ನಮ್ಮ ಭಾಷೆಗೆ ಹೆಮ್ಮೆಯ ಕೋಡು ಮೂಡಿಸಿದ ಪಂಪ, ರನ್ನರ, ಜನ್ನ, ನೇಮಿಚಂದ್ರರ, ಕುಮಾರವ್ಯಾಸ ಲಕ್ಷ್ಮೀಶರ ಕೃತಿಗಳನ್ನು ಧೀರಗಂಭೀರವಾದ

ದನಿಯಲ್ಲಿ ವಾಚಿಸುವ, ರಸಸ್ಥಾನಗಳನ್ನು ಹಿಡಿದು ವ್ಯಾಖ್ಯಾನಿಸುವ, ಭಾಷಾಶೈಲಿಗಳ ಗತಿ, ಗಮಕಗಳ ಸೂಕ್ಷ್ಮತೆಗಳನ್ನು ವಿಶ್ಲೇಷಿಸುವ ಯುವ ಪೀಳಿಗೆಯೇ ಕಣ್ಮರೆಯಾಗುತ್ತಿರುವಂತೆ ಭಾಸವಾಗುತ್ತಿದೆ. ಈ ದಿಕ್ಕಿನಲ್ಲಿ ಸಾಹಿತ್ಯಾಸಕ್ತ ಯುವಕ-ಯುವತಿಯರಿಗೆ ಪ್ರೋತ್ಸಾಹದಾಯಕ ಯೋಜನೆಗಳು ಏರ್ಪಡಬೇಕು, ಮಾರ್ಗದರ್ಶನ ಶಿಕ್ಷಣಗಳು ದೊರೆಯಬೇಕು.

ವಿದೇಶದ ವಿಶ್ವವಿದ್ಯಾನಿಲಯಗಳಲ್ಲಿ Professor of Classics ಎಂಬ ಹುದ್ದೆಯೇ ಇರುತ್ತಿದ್ದುದನ್ನು ನಾನು ಗಮನಿಸಿದ್ದೇನೆ. ಮುಂದೆ ಕನ್ನಡ ಭಾಷೆಗೆ ದೊರೆಯಲಿರುವ ಅಭಿಜಾತ ಸಾಹಿತ್ಯದ ಸ್ಥಾನಮಾನಗಳಲ್ಲಿ ಈ ತೆರನ ಹುದ್ದೆ ಅಥವಾ ಹುದ್ದೆಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆ. ಈ ಹುದ್ದೆಗಳು ವ್ಯಾಕರಣ, ಛಂದಸ್ಸು, ಗ್ರಂಥಸಂಪಾದನೆ, ಶಾಸನಾಧ್ಯಯನ, ಸಾಹಿತ್ಯಚರಿತ್ರೆ, ಭಾಷಾವಿಜ್ಞಾನ, ನಿಘಂಟುಶಾಸ್ತ್ರ ಮೊದಲಾದ ಬೇರೆ ಬೇರೆ ಶಾಖೆಗಳಿಗೆ ಕೂಡ ಏರ್ಪಡಬಹುದಾಗಿದೆ. ಆಗ ಆಯಾ ಕ್ಷೇತ್ರಗಳಲ್ಲಿ ಕೆಲಸ ಮಾಡುವವರು ಜ್ಞಾನಕ್ಷೇತ್ರದ ದಿಗಂತಗಳನ್ನು ಇನ್ನಷ್ಟು ವಿಸ್ತರಿಸಲು ಸಾಧ್ಯವಾದೀತು. 'ಕಾವ್ಯಕ್ಕೆ ಸಮರ್ಥನೆ' ಎಂಬ ಕಾಲ ತನ್ನ ಗುರಿ ಸಾಧಿಸಿ ಆಗಿದೆ; ಇನ್ನು ಮೇಲೆ 'ಪಾಂಡಿತ್ಯಕ್ಕೆ ಸಮರ್ಥನೆ' ಎನ್ನುವ ಕಾಲ ಬರಬೇಕಾಗಿದೆ. ಆಗ ನಮ್ಮ ಸಂಪದ್ಯುಕ್ತವಾದ ಪ್ರಾಚೀನ ಸಾಹಿತ್ಯ ತನ್ನೆಲ್ಲ ವೈಭವ ವಿಲಾಸಗಳನ್ನೂ ಪ್ರಕಟಗೊಳಿಸಿ ಸಮಾಜವನ್ನು ಸಂಸ್ಕೃತಿ ಸಂಪನ್ನವಾದ, ರಸವಂತವಾದ ಬದುಕಿನೊಡನೆ ವಿಲೀನಗೊಳಿಸಿ ಸಾರ್ಥಕತೆಯ ಶಿಖರವನ್ನು ಮುಟ್ಟಬಲ್ಲುದಾಗಿದೆ. ಬಿ.ಎಂ.ಶ್ರೀ. ಪ್ರತಿಷ್ಠಾನ ನಡೆಸಿದ 'ಶಾಸ್ತ್ರೀಯ ಭಾಷೆಯ ಶ್ರೀಯೋಜನೆ' ಚಿಂತನಗೋಷ್ಠಿಯಲ್ಲಿ ಮಾಡಿದ ಭಾಷಣದ ಟಿಪ್ಪಣಿರೂಪ.

❒

## ಶತಮನೋತ್ಸವ ಸ್ಮರಣೆ



ಡಾ॥ ಅ.ನ. ಕೃಷ್ಣರಾವ್

(೯-೫-೧೯೦೮ ರಿಂದ ೮-೭-೧೯೭೧)

# ಅರಕಲಗೂಡು ನರಸಿಂಗರಾಯ ಕೃಷ್ಣರಾಯ (ಅ.ನ.ಕೃ.)

● ಎಸ್.ವಿ. ಶ್ರೀನಿವಾಸರಾವ್

ನಾಡು ನುಡಿಗಳ ನಿಷ್ಠ ಸೇವಕ ನೀನು
ಕನ್ನಡದ ಗದ್ಯ ಸಾಹಿತ್ಯಕೆ ನಿನ್ನಿಂದ ರಸಸೇಚನ
'ಹಲವು ಹೋರಾಟಗಳ ಕಡುಗಲಿ' ನಿನ್ನುಸಿರು ಕನ್ನಡತನ
ಕನ್ನಡಕೆ ಜೀವನವೇ ಮುಡುಪಾಗಿರಿಸಿದ ರಸಚೇತನ
ಕನ್ನಡೋದ್ಧಾರಕ್ಕಾಗಿ ಕಡಿದೊಗೆದೆ ಸಾಹಿತ್ಯ ಸಂಪ್ರದಾಯದ ಬಂಧನ
ಸಾಹಿತ್ಯ ಭಾಷಣದಿ ಎಡೆಬಿಡದೆ ನಡೆಸಿದೆ ವಿಚಾರ ಮಂಥನ
ಕನ್ನಡಿಗರಾತ್ಮ ಜಾಗೃತಿಗಾಗಿ ನಿನ್ನದು ಕನ್ನಡ ಚಳುವಳಿಯ ಸಾಧನ
ಕನ್ನಡದ ಶ್ರೀಗಂಧವಾಗಿ ಬಾಳ್ತೇಯ್ದ ನೀ ರಸಚೇತನ

ಡಾ. ಅ.ನ.ಕೃ. ಅವರಿಗೆ ಅರ್ಪಿಸಿದ ಗೌರವ ಗ್ರಂಥ 'ರಸಚೇತನ' ದಲ್ಲಿ ಗೋವಾದ 'ಮಧುಪ'ರು ಬರೆದಿರುವ ಈ ಮಾತುಗಳು 'ಅನಕೃ' ಅವರ ಸಮಗ್ರ ಜೀವನವನ್ನು ಪ್ರತಿಮಿಸುತ್ತವೆ.

ಕನ್ನಡ ಜನಮನದಲ್ಲಿನ ಕನ್ನಡಾಭಿಮಾನದ ಸೆಲೆಯಾಗಿದ್ದ ಅ.ನ.ಕೃ. ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದ ಬಹುಶ್ರುತ ಪ್ರತಿಭೆಯ ಜೀವಂತ ಮೂರ್ತಿಯಾಗಿದ್ದರು. ಗೌರೀಶ ಕಾಯ್ಕಿಣಿಯವರು ಈ ಪ್ರತಿಭಾ ಮೂರ್ತಿಯನ್ನು ತಮ್ಮ ಮಾತುಗಳಲ್ಲಿ ಹೀಗೆ ಕಂಡರಿಸಿದ್ದಾರೆ.

'ಪ್ರತಿಭೆಯ ವಿನ್ಯಾಸ ಮತ್ತು ಗೇರುಸೊಪ್ಪೆಯ ಚತುರ್ಮುಖ ಬಸದಿ. ಒಂದೊಂದು ಮುಖವೂ ಶ್ರೀ ಲಕ್ಷಣಯುಕ್ತವಾದದ್ದು; ಈ ಪ್ರತಿಭಾ ಸೌಂದರ್ಯದ ಒಂದು ಮುಖ ಕಥೆ ಕಾದಂಬರಿಗಳ ಲಲಿತ ನಿರ್ಮಿತಿ; ಇನ್ನೊಂದು ಮುಖ ಸಂಗೀತ, ನಾಟಕ, ಶಿಲ್ಪ, ಚಿತ್ರಗಳ ಬಗೆಗಿನ ಲೇಖನಗಳು; ಮೂರನೆಯದು ಸಾಹಿತ್ಯ ವಿಮರ್ಶೆ ಮತ್ತು ನಾಲ್ಕನೆಯದು ಧರ್ಮ ಸಂಸ್ಕೃತಿ ದರ್ಶನಗಳ ಕುರಿತು ತಾತ್ವಿಕ ಮೀಮಾಂಸೆ'.

**ಜನನ: ವಿದ್ಯಾಭ್ಯಾಸ :**

ಅರಕಲಗೂಡು ನರಸಿಂಗರಾಯರು ಮತ್ತು

ಅನ್ನಪೂರ್ಣಮ್ಮನವರ ಮಗನಾದ ಕೃಷ್ಣರಾಯರು ಜನಿಸಿದ್ದು ಮೇ ೯, ೧೯೦೮, ಕೋಲಾರದಲ್ಲಿ. ನರಸಿಂಗರಾಯರು ರೆವಿನ್ಯೂ ಇಲಾಖೆಯಲ್ಲಿ (ಶಿರಸ್ತೇದಾರ) ಇದ್ದುದರಿಂದ ಹಲವಾರು ಊರುಗಳಲ್ಲಿ ನೌಕರಿ ಮಾಡಬೇಕಾಗುತ್ತಿತ್ತು. ಆದ್ದರಿಂದ ಇವರ ವಿದ್ಯಾಭ್ಯಾಸ ವ್ಯವಸ್ಥಿತವಾಗಿ ನಡೆಯಲಿಲ್ಲ. ಎಫ್.ಎ.ವರೆಗೆ(ಈಗಿನ ಪಿ.ಯು.ಸಿ.) ಓದಲು ಮಾತ್ರ ಸಾಧ್ಯವಾಗಿತ್ತು. ಆದರೂ ಓದಿನಲ್ಲಿ ಬಹು ಆಸಕ್ತಿಯಿದ್ದು ಇವರು ಸಾಹಿತ್ಯಾಭ್ಯಾಸ ಮುಂದುವರಿಸಿ ಪದವೀಧರರಿಗೂ ಮಿಗಿಲಾದ ವಿದ್ವತ್ತು ಮತ್ತು ಪ್ರತಿಭೆಯನ್ನು ಕನ್ನಡ ಹಾಗೂ ಇಂಗ್ಲಿಷಿನಲ್ಲಿ ಸಂಪಾದಿಸಿದರು, ಎಲ್.ಎಸ್. ನಂತರ ಮುಂದಿನ ವಿದ್ಯಾಭ್ಯಾಸಕ್ಕಾಗಿ ಇವರು ದೇಶೀಯ ವಿದ್ಯಾಶಾಲೆ ಸೇರಿದರು. ದೇಶೀಯ ವಿದ್ಯಾಶಾಲೆ ಕ್ರಾಂತಿಕಾರರ ಗರಡಿ ಎಂದೇ ಹೆಸರಾಗಿತ್ತು. ಇವರ ವ್ಯಕ್ತಿತ್ವಕ್ಕೆ ರೂಪಗೊಡಲು ಅಲ್ಲಿದ್ದ ಸಂಪದ್ಗಿರಿರಾಯರು, ಕಂಪಾಡೆ ಕೃಷ್ಣ ಅಯ್ಯಂಗಾರರು, ಎಚ್.ಟಿ. ರಾಮರಾಯರು, ಪದ್ಮನಾಭ ಅಯ್ಯ, ಕೆ.ಟಿ. ಸುಬ್ಬರಾಯರು ಮುಂತಾದ ಹಿರಿಯರ ಮಾರ್ಗದರ್ಶನ ಕಾರಣವಾಯಿತು. ಇದರಿಂದಾಗಿ ಇವರು ಪದವೀಧರರಿಗೂ ಮಿಗಿಲಾದ ವಿದ್ವತ್ತು ಮತ್ತು ಪ್ರತಿಭೆಯನ್ನು, ಕನ್ನಡ ಮತ್ತು ಇಂಗ್ಲೀಷಿನಲ್ಲಿ ಸಂಪಾದಿಸಿಕೊಂಡರು. ದೇಶೀಯ ಭಾವನೆ, ಕನ್ನಡಾಭಿಮಾನ ಜಾಗೃತಗೊಂಡವು. ಮನಸ್ಸಿನಲ್ಲಿ ಮೂಡಿದ ಭಾವವನ್ನು ಲಿಖಿತರೂಪದಲ್ಲಿರಿಸಲು ಸಜ್ಜಾದರು. ಮೈಸೂರು ವಿಶ್ವವಿದ್ಯಾಲಯ ಇವರ ಸಾಹಿತ್ಯ ಸೇವೆಯನ್ನು ಮೆಚ್ಚಿ ಜನವರಿ ೨೭, ೧೯೭೦ರಂದು ಗೌರವ ಡಿಲಿಟ್ ಪ್ರಶಸ್ತಿ ನೀಡಿ ಗೌರವಿಸಿತು.

ಈ ಸಂದರ್ಭದಲ್ಲಿ ಕನ್ನಡದ ಇನ್ನೊಬ್ಬ ಖ್ಯಾತಸಾಹಿತಿಗಳಾಗಿದ್ದ 'ನಿರಂಜನ'ರು ಆಡಿರುವ ಮಾತು ಉಲ್ಲೇಖನೀಯ. "ಕನ್ನಡ ಮನೆ ಮನೆಗಳಲ್ಲಿ ಅ.ನ.ಕೃ. ಮೂರಕ್ಷರ ಚಿರಸ್ಥಾನಗಳಿಸಿ ಬಹಳ ಕಾಲವಾಯಿತು. ಇನ್ನು ನಾಲ್ಕಕ್ಷರಗಳಿಗೆ ನೆಲೆ ಡಾ. ಅ.ನ.ಕೃ." ಉಡುಪಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಕನ್ನಡ ಸಾಹಿತ್ಯ ಪರಿಷತ್ತು ಆಯ್ಕೆ ಮಾಡಿ ಪುರಸ್ಕರಿಸಿತು. ೧೯೬೮ರಲ್ಲಿ ಸಾಹಿತ್ಯ ಅಕಾಡೆಮಿ ಸಹ ಇವರಿಗೆ ಗೌರವ ಪ್ರಶಸ್ತಿ ನೀಡಿತ್ತು.

ಅ.ನ.ಕೃ. ಅವರ ತಂದೆಯವರಿಗೆ ನಾಟಕದಲ್ಲಿ ತುಂಬಾ ಅಭಿರುಚಿ ಇತ್ತು. ಇದರ ಅಭಿವೃದ್ಧಿಗಾಗಿ ತಮ್ಮ ಜೀವನದುದ್ದಕ್ಕೂ ಶ್ರಮಿಸಿದರು. ವರದಾಚಾರ್ಯರನ್ನು ರಂಗ ಪ್ರವೇಶ ಮಾಡಿಸಿದ ಯಶಸ್ಸು ಇವರದು. ಈ ವರದಾಚಾರ್ಯರ ಕಂಪನಿಯಲ್ಲಿ ಆಡುತ್ತಿದ್ದ ನಿರುಪಮಾ, ಶಕುಂತಲಾ, ರತ್ನಾವಳಿ ನಾಟಕಗಳಿಗೆ ಅ.ನ.ಕೃ ಮನ ಸೋತಿದ್ದರೂ ಹೊಸದನ್ನು ನೀಡುವ ಹುಮ್ಮಸ್ಸು ಇವರಲ್ಲಿ ಜಾಗೃತವಾಗಿತ್ತು. ಪಾಶ್ಚಾತ್ಯ ನಾಟಕಗಳನ್ನು ಓದಿ ಪ್ರಭಾವಿತರಾಗಿದ್ದ ಇವರು ಹಳೆಯ ಕಂದಾಚಾರದ ನಾಟಕಗಳಿಗೆ ಬದಲಾಗಿ ಸಾಮಾಜಿಕ ಕಳಕಳಿ ಇರುವ ನಾಟಕಗಳನ್ನೇಕೆ ಜನರಿಗೆ ಕೊಡಬಾರದೆಂದು ವರದಾಚಾರ್ಯರಲ್ಲಿ ಪ್ರಸ್ತಾಪಿಸಿದರು. ಅವರು ಈ ಸಲಹೆಗೆ ಕೂಡಲೇ ಒಪ್ಪಿಗೆ ನೀಡಿ ಅಂತಹದೊಂದು ನಾಟಕವನ್ನು ಬರೆದುಕೊಡಲು ಸೂಚಿಸಿದರು. ಆಗ ಅ.ನ.ಕೃ ಅವರಿಗೆ ಇನ್ನೂ ೧೬ ವರ್ಷ. ಆಗಲೇ ರೂಪುಗೊಂಡದ್ದು 'ಮದುವೆಯೋ ಮನೆಹಾಳೋ' ನಾಟಕ. ಇದೇ ಅವರ ಪ್ರಥಮ ಬರವಣಿಗೆ. ಇದೇ ಅವರ ಸಮೃದ್ಧ, ಸಂಪನ್ನ ಸಾಹಿತ್ಯಕೃಷಿಗೆ ನಾಂದಿ ಹಾಡಿತು. ಹೀಗೆ ೧೯೨೪ರಲ್ಲಿ ಸಾಹಿತಿಯ ಜನನವಾಯಿತು. ಅವರೇ ಅ.ನ.ಕೃಷ್ಣರಾಯರು. ಅ– ಅಸ್ಖಲಿತ ಪ್ರತಿಭಾವಂತ; ನ–ನಯವಿನಯ

ಸಂಪನ್ನ; ಕೃ- ಕೃಪಾ ಕೃಪಾಣಧಾರಿ; ಧ್ವನಿಸಿತೋ 'ಕನ್ನಡದ' ದಿವ್ಯ ತುತ್ತೂರಿ, ಮೂಲೆ ಮೂಲೆಗಳಿಗೆಲ್ಲ ಕಂಪು ಕಸ್ತೂರಿ. -ಜಯಂತ ಕಾಯ್ಕಿಣಿಯವರ ವರ್ಣನೆ.

**ಕನ್ನಡದ ಕಟ್ಟಾಭಿಮಾನಿ :**

ಕನ್ನಡದ ಕಟ್ಟಾಭಿಮಾನಿಯಾಗಿದ್ದ ಇವರು ೧೩-೦೫-೧೯೬೭ರಲ್ಲಿ ಕರ್ನಾಟಕ ಸಂಯುಕ್ತರಂಗ ಸ್ಥಾಪಿಸಿ ಗಡಿನಾಡಿನಲ್ಲಿ ಪ್ರಚಾರ ಕಾರ್ಯಕ್ಕೆ ತೊಡಗಿಸಿದರು. ಮ.ರಾಮಮೂರ್ತಿ, ಭಾರತೀಂದ್ರ ಸ್ವಾಮಿ, ನಾಡಿಗೇರ ಕೃಷ್ಣರಾವ್, ಮೈ.ಸು. ಶೇಷಗಿರಿರಾವ್, ಎಂ.ಎಸ್. ನಟರಾಜ್ ಮುಂತಾದವರು ಅಹರ್ನಿಶಿ ಇವರೊಡನೆ ಸಹಕರಿಸಿದರು. ಕನ್ನಡ ಸಾಹಿತ್ಯದ ಈ ನವೋದಯ ಕಾಲವನ್ನು ರೂಪಿಸಿದ ಯುಗಾಚಾರ್ಯರು ಈ ಅನಕೃ. ಪ್ರಗತಿಶೀಲ ಸಾಹಿತ್ಯ ಚಳುವಳಿಗೆ ನಿಶ್ಚಿತ ರೂಪ ನೀಡಿ ಮಹಾರಾಷ್ಟ್ರದಲ್ಲೂ ಕನ್ನಡ ಸಾಹಿತ್ಯ ಸಂಸ್ಕೃತಿಯ ಹಿರಿಮೆ ಗರಿಮೆಯನ್ನು ಬಿತ್ತರಿಸಿದರು. ಹೈದರಾಬಾದ್‌ನಲ್ಲಿ ಕಾಸಿಂರಜ್ವಿಯೊಡನೆ ಕುರಾನ್ ಮೇಲೆ ಚರ್ಚೆ ನಡೆಸಿ ಆತನ ಮನಸ್ಸನ್ನು ಗೆದ್ದುದಲ್ಲದೆ, ತಾವು ಮೆಚ್ಚಿ ನಡೆಸಿದ ನೀತಿ ಧೋರಣೆಗೆ ವಿರುದ್ಧವಾಗಿ ನಿಂತವರು. ಎಂತಹ ಗಣ್ಯ ವ್ಯಕ್ತಿಯೇ ಆದರೂ ತಮ್ಮ ಸಿದ್ಧಾಂತ ದೊಡನೆ ರಾಜಿಮಾಡಿಕೊಂಡು ಮಣಿಯಲು ಸಿದ್ಧರಿಲ್ಲ ಎಂಬುದನ್ನು ತೋರಿಸಿಕೊಟ್ಟರು. ಕನ್ನಡ ಸಾಹಿತ್ಯ ಪರಿಷತ್ತಿನ ಅಂದಿನ ಅಧ್ಯಕ್ಷರಾಗಿದ್ದ ರಂ.ರಾ. ದಿವಾಕರರ ಹಿಂದಿ ಪ್ರಚಾರ ನೀತಿಯನ್ನು ಪ್ರತಿಭಟಿಸಿ, 'ಕನ್ನಡನುಡಿ'ಯ ಸಂಪಾದಕತ್ವಕ್ಕೆ ರಾಜೀನಾಮೆ ನೀಡಿ ತಮ್ಮ ನಿಲುವನ್ನೇ ಎಲ್ಲೆಡೆ ಘಂಟಾಘೋಷವಾಗಿ ಶ್ರುತಿಪಡಿಸಿದರು. 'ಕನ್ನಡಕ್ಕೆ, ಕನ್ನಡಿಗರಿಗೆ, ಅನ್ಯಾಯವಾದಾಗ ಅನಕೃ ಕೆರಳುತ್ತಾರೆ, ಪಾಂಚಜನ್ಯ ನುಡಿಸುತ್ತಾರೆ, ಸುದರ್ಶನ ಬಿಡುತ್ತಾರೆ' (ನಾಡಿಗೇರ ಕೃಷ್ಣರಾಯ) ಎಂಬುದನ್ನು ಮಾಡಿ ತೋರಿಸಿದರು.

'ನಾನು ತಮಿಳುಕನ್ನಡಿಗ; ಮಿರ್ಜಾಇಸ್ಮಾಯಿಲ್ಲರು ಮುಸ್ಲಿಂ ಕನ್ನಡಿಗರು; ಆದರೆ ಅ.ನ.ಕೃಷ್ಣರಾಯರು ಅಚ್ಚ ಕನ್ನಡಿಗರು' ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಮಾತಿನಂತೆ ತನ್ನ 'ಅಚ್ಚಕನ್ನಡತನ'ವನ್ನು ಅ.ನ.ಕೃ, ಕಾಯಾವಾಚಾ ಮನಸಾ ಸಾಧಿಸಿ ತೋರಿಸಿದ್ದಾರೆ. ಚಿರಸ್ಥಾಯಿಯಾಗಿ ಕನ್ನಡಿಗರ ಮನದಲ್ಲಿ ನೆಲೆಸಿದ್ದಾರೆ.

**ವಿವಾಹ :**

ಹೈದರಾಬಾದ್ ಕನ್ನಡ ಪ್ರೊಫೆಸರ್ ಕೃಷ್ಣಸ್ವಾಮಿಯವರ ಮಗಳು ವಸಂತಾದೇವಿ, ಅ.ನ.ಕೃ. ರವರ ಪತ್ನಿ. ೧೯೩೦ರಲ್ಲಿ ಇವರ ವಿವಾಹವಾಗಿ ಇವರು ಬೆಂಗಳೂರಿನ ಗಂಡನ ಮನೆ 'ಅನ್ನಪೂರ್ಣ' ಪ್ರವೇಶಿಸಿದರು. ಗಂಡನಿಗೆ ಅನುರೂಪ ಪತ್ನಿಯಾಗಿದ್ದುದಲ್ಲದೆ ಸಾಹಿತ್ಯ ಜೀವನಕ್ಕೆ ಪೋಷಕರಾಗಿ, ಪ್ರೇರಕಳಾಗಿ, ಕ್ರಾಂತಿ ಪುರುಷನ ಸಹಚರಳಾಗಿ ಎಲ್ಲಾ ಚಟುವಟಿಕೆ ಗಳಿಗೂ ಸ್ಫೂರ್ತಿದಾಯಿನಿಯಾಗಿ ಗಂಡನ ಜೀವನದುದ್ದಕ್ಕೂ ಸಹಕರಿಸಿದರು.

ಸಾಹಿತ್ಯರಚನೆಯಲ್ಲಿ ತನ್ನ ಗಂಡನಿಗೆ ಇದ್ದ ಆಸ್ಥೆ, ತನ್ಮಯತೆ ಮತ್ತು ಗಂಭೀರ ಚಿಂತನೆ ಬಗ್ಗೆ ಇದ್ದ ಗೌರವವನ್ನು ಅವರ ಈ ಮಾತುಗಳು ಪ್ರತಿಧ್ವನಿಸುತ್ತವೆ.

'...ಪುಸ್ತಕ ಬರೆಯುವ ಹಲವು ತಿಂಗಳ ಮುನ್ನ ಇವರದು ಬಲು ಗಂಭೀರ ಮುಖ. ಕೇಳಿದರೆ "ನೋಡು. ಪುಸ್ತಕವನ್ನು ಬರೆಯಲು ಶುರು ಮಾಡುವುದಕ್ಕೆ ಮುಂಚೆ. ಮೂರು

ವರ್ಷಗಳ ಕಾಲ ಪ್ರತಿಯೊಂದು ಪಾತ್ರವನ್ನು ತಲೆಯಲ್ಲಿ ಪಾಕ(Cook)ಮಾಡುತ್ತೇನೆ", ಅನ್ನುತ್ತಿದ್ದರು. ಪುಸ್ತಕಮುಗಿಸಿ ಲೇಖನಿ ಕೆಳಗಿಟ್ಟು "ನಾನು ನಿನಗೊಂದು ಪೇಶಂಟ್ ನನ್ನ ಒಬ್ಬ ಪೇಶಂಟನಂತೆ ಕಾಣು" ಎನ್ನುತ್ತಿದ್ದರು. ಆಗ ಮಗುವನ್ನು ಹಡೆದ ಬಾಣಂತಿಯಂತೆ ಕಾಣುತ್ತಿದ್ದರು...."

ಕನ್ನಡದ ಸಾಹಸಿ ಹೋರಾಟಗಾರರಾಗಿ ನಾಡು ನುಡಿಗಾಗಿ ಅಹರ್ನಿಶಿ ಶ್ರಮಿಸುತ್ತಿದ್ದಾಗಲೇ ಮತ್ತೊಬ್ಬ ಕನ್ನಡಗ ರಚಿಸಲಾರದಷ್ಟು ವೈವಿಧ್ಯಮಯ ಗ್ರಂಥ ರಾಶಿಯನ್ನು (ಸೃಜನಾತ್ಮಕ ಹಾಗೂ ಸೃಜನೇತರ) ರಚಿಸಿ ಅಮರವಾಗುಳಿದಿದ್ದಾರೆ; ಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆ. ಪರಿಸ್ಥಿತಿಯನ್ನು ವಿಸ್ತೃತಗೊಳಿಸಿದ್ದಾರೆ. ಓದುಗರಲ್ಲಿ ಓದುವ ಶಕ್ತಿಯನ್ನು ಉತ್ತೇಜಿಸಿದ್ದಾರೆ. ಓದುಗರ ಸಂಖ್ಯೆಯನ್ನು ಗಣನೀಯ ಸಂಖ್ಯೆಯಲ್ಲಿ ವೃದ್ಧಿಸಿದ್ದಾರೆ.

ಮಿಥಿಕ್ ಸೊಸೈಟಿಯ ಉಪಾಧ್ಯಕ್ಷರಾಗಿ ೫-೬ ವರ್ಷ ಶ್ರಮಿಸಿ ಸಂಸ್ಥೆಯನ್ನು ಅಭಿವೃದ್ಧಿ ಪಡಿಸಿದ್ದುದಲ್ಲದೆ ಗ್ರಂಥಾಲಯದ ಆಧುನಿಕತೆ ಹಾಗೂ ಸಂಶೋಧನಾ ಪ್ರಕ್ರಿಯೆಗೆ ಇಂಬು ನೀಡಿರುತ್ತಾರೆ. ಅಪಾರ ಸಂಖ್ಯೆಯಲ್ಲಿ ಏಕಾಂಕ ನಾಟಕಗಳನ್ನು ರಚಿಸಿರುವುದಲ್ಲದೆ 'ರಂಗನಾಟಕ' ಸಹ ರಚಿಸಿ ನಾಟಕ ಕ್ಷೇತ್ರವನ್ನು ಸಂಪನ್ನಗೊಳಿಸಿದ್ದಾರೆ.

## ಬಹುಮುಖ ಪ್ರತಿಭೆ :

ಬಹುಮುಖ ಪ್ರತಿಭೆಯ (ಕಥೆ, ಕಾದಂಬರಿಕಾರ; ವಿಮರ್ಶಕ; ನಾಟಕಕಾರ; ಪ್ರಬಂಧಕಾರ ಹಾಗೂ ಕವಿ) ಶ್ರೀಯುತರು ಪತ್ರಿಕಾರಂಗವನ್ನು ಸಂಪನ್ನಗೊಳಿಸಿದ್ದಾರೆ. 'ಕಥಾಂಜಲಿ' (೧೯೨೮)ಯ ಸಂಪಾದಕರಾಗಿ ಬಾಂಬೆ ಕ್ರಾನಿಕಲ್ (ಇಂಗ್ಲಿಷ್)ನ ಸಹ ಸಂಪಾದಕರಾಗಿ, 'ವಿಶ್ವವಾಣಿ' ಮಾಸಪತ್ರಿಕೆಯ ಸಂಪಾದಕ (೧೯೩೬-೩೭); ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡನುಡಿ'ಯ ಸಂಪಾದಕತ್ವ (೧೯೩೯-೧೯೪೦) ಹಾಗೂ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪಾದನೆ (೧೯೪೪) ಯಶಸ್ವಿಯಾಗಿ ನಿರ್ವಹಿಸಿದ ಹೆಗ್ಗಳಿಕೆ ಇವರದು.

ಅ.ನ.ಕೃ ಕನ್ನಡದ ಕಾದಂಬರಿ ಸಾಮ್ರಾಟ್‌ರೆಂದೇ ಪ್ರಸಿದ್ಧರಾಗಿದ್ದರೂ ಫಿಟ್ಜ ಜರಾಲ್ಡನ ಕಾವ್ಯವನ್ನು ಕನ್ನಡಕ್ಕೆ 'ಉಮರನ ರುಬಾಯಿಯತ್' (೫೧ ಪದ್ಯ ಸಂಗ್ರಹ) ಹೆಸರಿನಲ್ಲಿ ಅನುವಾದಿಸಿ ನೀಡಿರುತ್ತಾರೆ.

## ಇವರು ರಚಿಸಿರುವ ಒಟ್ಟು ಕೃತಿಗಳ ಸಂಖ್ಯೆ : ಸುಮಾರು ೧೯೦

ಸಂಧ್ಯಾರಾಗ, ನಟಸಾರ್ವಭೌಮ, ಗೃಹಲಕ್ಷ್ಮಿ, ಕಣ್ಣೀರು, ತಾಯಿ ಕರುಳು, ನಗ್ನ ಸತ್ಯ, ಶನಿ ಸಂತಾನ, ಮಂಗಳಸೂತ್ರ, ರತ್ನದೀಪ, ಭಾಗ್ಯದ ಬಾಗಿಲು, ಕಣ್ಣಿನ ಗೊಂಬೆ - ಮುಂತಾದ ೯೫ ಸಾಮಾಜಿಕ ಕಾದಂಬರಿಗಳು, ಗರುಡ ಮಚ್ಚೆ, ವೀರರಾಣಿ ಕಿತ್ತೂರು ಚೆನ್ನಮ್ಮ, ತಪೋಬಲ, ಪ್ರೌಢ ಪ್ರತಾಪಿ, ಪುಣ್ಯ ಪ್ರಭಾವ, ಭುವನ ಮೋಹಿನಿ ಪ್ರಳಯಾನಂತರ, ರಣವಿಕ್ರಮ - ಮುಂತಾದ ೧೬ ಐತಿಹಾಸಿಕ ಕಾದಂಬರಿಗಳು, ಅಗ್ನಿಕನ್ಯೆ, ಕಾಮನ ಸೋಲು, ಕಿಡಿ, ಪಾಪ ಪುಣ್ಯ, ಶಿಲ್ಪಿ, ಸುಮನ ಸುಂದರಿ - ಮುಂತಾದ ೮ ಕಥಾ ಸಂಕಲನಗಳು, ಮದುವೆಯೋ ಮನೆಹಾಳೋ, ಸ್ವರ್ಣ ಮೂರ್ತಿ, ಧರ್ಮ ಸಂಕಟ, ಜ್ವಾಲಾಮುಖಿ, ಹಿರಣ್ಯಕಶಿಪು,

ಶ್ರೀ ರಾಮಪಾದುಕಾ ಪಟ್ಟಾಭಿಷೇಕ, ಅನುಗ್ರಹ, ಜಗಜ್ಯೋತಿ ಬಸವೇಶ್ವರ, ರಜಪೂತ ಲಕ್ಷ್ಮೀ, ರಾಜ ನರ್ತಕಿ – ಮುಂತಾದ ೨೨ ನಾಟಕಗಳು, ಅಲ್ಲಮಪ್ರಭು, ಕನ್ನಡ ಕುಲ ರಸಿಕರು, ಕರ್ನಾಟಕ ಕಲಾವಿದರು ಭಾಗ ೧, ೨; ಕೈಲಾಸಂ, ದೀನಬಂಧು ಕಬೀರ, ಭಾರತದ ಬಾಪೂ, ವಿಶ್ವಬಂಧು, ಬಸವೇಶ್ವರ, ಸ್ವಾಮಿ ವಿವೇಕಾನಂದ – ಮುಂತಾದ ೧೧ ಜೀವನ ಚರಿತ್ರೆಗಳಲ್ಲದೆ ಸುಮಾರು ೨೦ ಪ್ರಬಂಧ–ವಿಮರ್ಶಾಕೃತಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಮುಖ್ಯವಾದವುಗಳು : ಕನ್ನಡದ ದಾರಿ, ಅಖಂಡ ಕರ್ನಾಟಕ, ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ರಾಘವಾಂಕನ ಹರಿಶ್ಚಂದ್ರ ಕಾವ್ಯ, ಸಮದರ್ಶನ, ಸಾಹಿತ್ಯ ಮತ್ತು ಕಾಮಪ್ರಚೋದನೆ, ಸಾಹಿತ್ಯ ಮತ್ತು ಜೀವನ, ಸಾಹಿತ್ಯಸಮಾರಾಧನೆ, ನಾಟಕಕಲೆ, ವೀರಶೈವಸಾಹಿತ್ಯ ಮತ್ತು ಸಂಸ್ಕೃತಿ, ಸಜೀವ ಸಾಹಿತ್ಯ, ಭಾರತೀಯ ಚಿತ್ರಕಲೆ. ಇವರು ಸಂಪಾದಿಸಿದ ಗ್ರಂಥಗಳ ಸಂಖ್ಯೆಯೇ ಹತ್ತು. 'ಮರುಳಸಿದ್ಧಕಾವ್ಯ', 'ಭಗವದ್ಗೀತಾರ್ಥಸಾರ', 'ಕಾಮನಬಿಲ್ಲು ೧, ೨', 'ಪ್ರಣಯ ಗೀತೆಗಳು', 'ರಸಋಷಿ', 'ಭಾರತೀಯ ಕಲಾ ದರ್ಶನ', 'ಭಾರತೀಯ ಸಂಸ್ಕೃತಿ ದರ್ಶನ' ಮುಂತಾದವುಗಳು. 'ನೀಲ ಲೋಚನೆ'; ರಸಿಕಾಗ್ರಣಿ ರುಬಾಯಿಯತ್ (ಕಾವ್ಯ) ಭಾರತದ ಕಥೆ (ಅನುವಾದಗಳು).

'ನನ್ನನಾ ಕಂಡಂತೆ' ಕೃತಿಯು ಅ.ನ.ಕೃ.ರ ಆಳವಾದ ಅಧ್ಯಯನ ಚಿಂತನ–ಮಂಥನವನ್ನು ವ್ಯಕ್ತಪಡಿಸುತ್ತದೆ. ಕನ್ನಡಿಗರಿಗೆ ತಮ್ಮ ಸಾಮರ್ಥ್ಯವನ್ನು ಅರಿವು ಮಾಡಿಕೊಟ್ಟು ಮುನ್ನಡೆಯುವುದಕ್ಕೆ ಬೆಳಕನ್ನು ನೀಡುತ್ತದೆ.

ರಾಯರು ಕನ್ನಡಿಗರಿಗೆ ಉಪದೇಶಿಸಿದ ತಾರಕಮಂತ್ರ: 'ಕನ್ನಡ ಪುಸ್ತಕಗಳನ್ನು ಓದಬೇಕು, ಕನ್ನಡ ಗೀತೆಗಳನ್ನು ಹಾಡಬೇಕು, ಕನ್ನಡ ಚಿತ್ರಗಳನ್ನು ನೋಡಬೇಕು, ಕನ್ನಡಿಗರಿಗೆ ಕನ್ನಡವೇ ದೇವರು'.

ಕನ್ನಡಿಗರು ಈ ತಾರಕ ಮಂತ್ರವನ್ನು ನಿತ್ಯ ಜೀವನದಲ್ಲಿ ಅನುಷ್ಠಾನಕ್ಕೆ ತಂದಾಗಲೇ 'ನಾಡು, ನುಡಿಯ ಉದ್ಧಾರವಾಗಲು ಸಾಧ್ಯ ಎಂಬುದನ್ನು ಮನಗಾಣಬೇಕು.

ಕನ್ನಡ ನಾಡು–ನುಡಿಗೆ ನಿಷ್ಠೆಯಿಂದ ಅಪಾರ ಸೇವೆ ಸಲ್ಲಿಸಿರುವ ಡಾ. ಅ.ನ.ಕೃ ಅವರಿಗೆ ಕನ್ನಡಿಗ ಅಭಿಮಾನಿಗಳು ೧೯೭೦ರಲ್ಲಿ 'ರಸಚೇತನ' ಗ್ರಂಥವನ್ನು ಉಡುಗೊರೆಯಾಗಿ ನೀಡಿ ಸಂಭ್ರಮಿಸಿದ್ದರು.

## ನಿಧನ :

ದಿನಾಂಕ : ೦೮-೦೭-೧೯೭೧ರಂದು ಇವರು ಮರಣ ಹೊಂದಿದಾಗ ಕನ್ನಡ ದಿವ್ಯ ತಾರೆಯೊಂದು ಅಸ್ತಮಿಸಿತೆಂದು ಕನ್ನಡ ಜನತೆ ದುಃಖಿಸಿತು. ಬಿಟ್ಟು ಹೋಗಿರುವ ಅಪಾರ ಜನಪ್ರಿಯ ಸಾಹಿತ್ಯದಿಂದಾಗಿ ಜನಮನದಲ್ಲಿ ಸದಾ ಹಸಿರಾಗುಳಿದಿದ್ದಾರೆ. ಸುಮಾರು ೩೮ ವರ್ಷಗಳ ನಂತರ ಮತ್ತೆ ಕನ್ನಡಾಭಿಮಾನಿಗಳು 'ಅಮರಚೇತನ' ಎಂಬ ಬೃಹತ್ ಸಂಪುಟ ಸಮರ್ಪಿಸಿ ತಮ್ಮ ಗೌರವ ಹಾಗೂ ಪ್ರೀತ್ಯಾದರ ಶಾಶ್ವತವಾದದ್ದು ಎಂಬುದನ್ನು ಸಮರ್ಥಿಸಿದ್ದಾರೆ. 'ರಸಚೇತನ' ಮತ್ತು 'ಅಮರ ಚೇತನ' ಈ ಎರಡೂ ಬೃಹತ್ ಕೃತಿಗಳನ್ನು ಸಂಪಾದಿಸಿರುವವರು: ಅ.ನ.ಕೃ ಅವರ ಆಪ್ತಮಿತ್ರ ಶ್ರೀ ಶಾ.ಮಂ. ಕೃಷ್ಣರಾಯರು.

ತಿ.ನ.ಕೃ.ಅವರ ನುಡಿಮುತ್ತುಗಳು :

೧. ಸಂಸಾರವೆಂಬುದೊಂದು ಗಾಳಿಯ ಸೊಡರು. ಅದು ಯಾವಾಗ ಆರಿಹೋಗುವುದೊ ಹೇಳಲು ಬರುವಂತಿಲ್ಲ. ಸಿರಿಯೆಂಬುದು ಸಂತೆಯ ಮಂದಿಯಂತೆ ; ಕಾಡಬೆಳದಿಂಗಳಂತೆ ಅದಕ್ಕೆ ಶಾಶ್ವತತೆಯಿಲ್ಲ.

೨. ಹುಟ್ಟಿದವರು ಸಾಯಲೇಬೇಕು–ಸತ್ತವರನ್ನು ಮರೆಯಲೇಬೇಕು–ಇದೇ ಪ್ರಾಗತಿಕ ಜಗತ್ತಿನ ಮಹಾಮಂತ್ರವಾಗಬೇಕು.

೩. ಕುಲುಮೆಯಲ್ಲಿ ಬೆಂದ ಹೊರತು ಕಬ್ಬಿಣ ಹದವಾಗುವುದಿಲ್ಲ, ಬಾಳುರಿಯಲ್ಲಿ ಬೆಂದಲ್ಲದೆ ಆತ್ಮ ಸಂಸ್ಕಾರವಾಗುವುದಿಲ್ಲ.

೪. ಸತ್ಯ ಸೂರ್ಯನಿಗೆ ಹಲವು ಮುಖಗಳಿವೆ. ಕವಿ ಕಾಣುವುದು ಒಂದು ಮುಖ. ಉಳಿದವು ಸತ್ಯವಲ್ಲವೆನ್ನಲಾಗುವುದೇ?

೫. ಸಾಹಿತ್ಯವೆಂದರೆ ಸೀತೆಯಪಾವಿತ್ರ್ಯವೂ ಅಲ್ಲ. ಬಾವರಿ (ಸೂಳೆ)ಯ ವ್ಯಭಿಚಾರವೂ ಅಲ್ಲ. ಇವೆರಡರ ನಡುವಿನ ರಕ್ತಮಾಂಸಗಳಿದ್ದ ಮಾನವೀಯ ಗುಣದ ಕಥನ.

೬. ಒಂದು ನಾಡಿನ ಭಾಷೆ ಕೇವಲ ವ್ಯಾವಹಾರಿಕ ಸಾಧನವಲ್ಲ, ಭಾಷೆ ಒಂದು ನಾಡಿನ ಸಾಂಸ್ಕೃತಿಕ ಪ್ರತೀಕ, ಜತೆಯಲ್ಲಿ ಅರಿವು ಹುಟ್ಟಿಸಲು ಆಯಾ ದೇಶಭಾಷೆಗಳಿಗಿರುವ ಸಾಮರ್ಥ್ಯ ಉಳಿದ ಭಾಷೆಗಳಲ್ಲಿಲ್ಲ.

೭. ಜಾತಿ ಮತ ದೇಶಗಳ ಬಂಧನಕ್ಕೆ ಸಿಲುಕದೆ ವಿಶ್ವವಾಣಿಯಾಗಿ ನಿಲ್ಲುವ ಯೋಗ್ಯತೆಯುಳ್ಳದ್ದು ಸಂಗೀತ ಒಂದೇ. ವಿಶ್ವ ಕೌಟುಂಬಿಕ ಭಾವನೆಗಳನ್ನು ಬಿತ್ತುವುದಕ್ಕೆ ಸಂಗೀತಕ್ಕಿಂತ ಉತ್ತಮ ಸಾಧನವಿಲ್ಲ.

೮. ಪ್ರಕೃತಿ, ಮಾನವ ಇಬ್ಬರೂ ಸೌಂದರ್ಯದ ಕುಸಿರೆಳ್ಳನ್ನು ಬೀರುತ್ತಲೇ ಇರುತ್ತಾರೆ. ಶ್ರೇಷ್ಠ ಕಲಾವಿದ ಅದಕ್ಕೆ ಮಡಿಲೊಡ್ಡುತ್ತಾನೆ.

೯. ಕನ್ನಡಕ್ಕೆ ನನ್ನಂತಹವರು ನೂರಾರು ಜನ. ನನಗಿರುವುದು ಒಂದೇ ಕನ್ನಡ– ಅದಕ್ಕಾಗಿ ಕೆಲಸ ಮಾಡದೆ ಬೇರಾವುದಕ್ಕೆ ಮಾಡಲಿ?

೧೦. ಮಾನವನ ಮಹಾಯಾತ್ರೆಯಲ್ಲಿ 'ಗುರು' ಒಂದು ಊರುಗೋಲಿದ್ದಂತೆ.

೧೧. ತತ್ವಾರ್ಥ ಪರಿಜ್ಞಾನಕ್ಕೆ ಧರ್ಮಗ್ರಂಥಗಳ ನೆರವು ಬೇಕು. ಅದಕ್ಕೂ ಹಿರಿದಾಗಿ ಸಾಧಕರ ಮೇಲ್ಪಂಕ್ತಿ ಬೇಕು, ಇವೆರಡಕ್ಕಿಂತ ಹೆಚ್ಚಾಗಿ ಭಕ್ತ ತನ್ನ ಅನುಭವದಿಂದಲೇ ಬೆಳಕು ಕಂಡುಕೊಳ್ಳಬೇಕು.

೧೨. ತಾಯಿಯಿಲ್ಲದ ತವರಿಗೆ ಮಗಳು ಬಂದರೆ ಉರಿಬೇಸಿಗೆಯಲ್ಲಿ ಮರಳು ಕಾಡಿಗೆ ಬಂದಂತೆ.

೧೩. 'ದೇವರು' ಅನ್ನುವ ಪರವಸ್ತುವೊಂದಿದೆ. ಅದು 'ಶಕ್ತಿ', 'ಸೌಂದರ್ಯ' ಸತ್ಯದ ಘನೀಭೂತ ಮೂರ್ತಿಯಾಗಿದೆ.

## 'ಅ.ನ.ಕೃ' ಬಗ್ಗೆ ಸಾಹಿತ್ಯ ದಿಗ್ಗಜರುಗಳ ಕೆಲ ಅನಿಸಿಕೆಗಳು :

* ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ಚಲನಶೀಲವಾದ ಸಂದರ್ಭ ಎಂದು ಗುರುತಿಸಬಹುದಾದ ಪ್ರಗತಿಶೀಲ ಚಳುವಳಿಯ ಕಾಲದಲ್ಲಿ, ಅದರ ಚಾಲಕಶಕ್ತಿಯಾಗಿ, ಅತ್ಯಂತ ಆಕರ್ಷಕವಾದ ಒಂದು ಅಯಸ್ಕಾಂತೀಂಯ ವ್ಯಕ್ತಿತ್ವದಿಂದ ಹೆಸರು ಮಾಡಿದವರು ಅ.ನ.ಕೃಷ್ಣರಾಯರು

*– ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪ*

* 'ಕಾದಂಬರಿ ಕ್ಷೇತ್ರದಲ್ಲಿ ನೂತನಶಕೆಯನ್ನು ಪ್ರಾರಂಭಿಸಿ, ಹೊಸ ಸಂಪ್ರದಾಯದ ಅಧ್ವರ್ಯುವಾದರು'

*–ಡಾ. ದೇ.ಜ.ಗೌ*

* 'ಈ ಶತಮಾನದ ನಾಲ್ಕನೆಯ ದಶಕವನ್ನು ಅ.ನ.ಕೃ. ದಶಕವೆಂದು ಕರೆದರೆ ತಪ್ಪಾಗಲಾರದು, ಪ್ರಗತಿಶೀಲ ಸಾಹಿತ್ಯದ ಅಧ್ವರ್ಯರಾಗಿ ಅವರು ನಮ್ಮ ಸಾಹಿತ್ಯಕ್ಕೆ ಹೊಸ ದನಿಯನ್ನು, ಕೊಡಿಸಿದರು.

*– ಡಾ. ಹಾ.ಮಾ. ನಾಯಕ*

* 'ಡಾ. ಕೃಷ್ಣರಾಯರು ಉತ್ತಮ ಸಾಹಿತಿಗಳು, ಅವರು ಕನ್ನಡ ಸಾಹಿತ್ಯದಲ್ಲಿ ಒಂದು ಆಂದೋಲನವನ್ನೇ ಉಂಟು ಮಾಡಿದ್ದಾರೆ.

*–ಕೆ.ವಿ. ಶಂಕರಗೌಡ (ವಿದ್ಯಾಸಚಿವರು)*

* 'ಡಾ. ಅ.ನ.ಕೃಷ್ಣರಾಯರು ಕಳೆದ ಅರ್ಧಶತಮಾನದಿಂದಲೂ ಸಾಹಿತ್ಯ ಲೋಕದಲ್ಲಿ ಅತ್ಯಧಿಕವಾಗಿ ಜನಪ್ರಿಯತೆಗಳಿಸಿ ಸುಮಾರು ೨೫,೦೦೦ ಪುಟಗಳಷ್ಟು ಕೃತಿಗಳನ್ನು ಕನ್ನಡ ಲೋಕಕ್ಕೆ ಅರ್ಪಿಸಿದ್ದಾರೆ.

*–ವೀರೇಂದ್ರ ಪಾಟಿಲ(ಮುಖ್ಯಮಂತ್ರಿ)*

* 'ಅವರ ಕಾದಂಬರಿ ಓದಲು ಹಿಡಿದರೆ ಮುಗಿಯುವವರೆಗೆ ಬಿಡುವ ಮನಸ್ಸಾಗುತ್ತಿರಲಿಲ್ಲ. ಭಾಷಣದಲ್ಲಿ ಅವರು ಹೇಗೆ ರಸೋತ್ಪಾದನೆ ಮಾಡುತ್ತಿದ್ದರೋ ಹಾಗೆಯೇ ಕಾದಂಬರಿಗಳಲ್ಲೂ ಸೊಗಸಾದ ಸನ್ನಿವೇಶ ಚಿತ್ರಣ ಮಾಡುತ್ತಿದ್ದರು.

*– ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ*

* 'ನಿತ್ಯ ಜೀವನ ಒಡ್ಡುವ ಸವಾಲುಗಳನ್ನು ಯಶಸ್ವಿಯಾಗಿ ಎದುರಿಸಬಲ್ಲ ಜನರನ್ನು ಚಿತ್ರಿಸುವಾಗ ಅ.ನ.ಕೃ ಅವರು ಸತ್ಯವನ್ನು ಹೃದಯವಂತಿಕೆಯ ಚಿಲುಮೆಗಳಲ್ಲಿ ಕಾಣುತ್ತಾರೆ

*– ಪ್ರೊ. ಎಲ್.ಎಸ್. ಶೇಷಗಿರಿರಾವ್*

* 'ನಮ್ಮ ಸಣ್ಣಕತೆಗಳ ವ್ಯಾಪ್ತಿಯನ್ನು ವಿಸ್ತಾರ ಪಡಿಸುವುದರಲ್ಲಿ ಶ್ರೀ ಅ.ನ.ಕೃಷ್ಣರಾಯರು ಶ್ಲಾಘ್ಯವಾದ ಕೆಲಸವನ್ನು ಮಾಡಿದ್ದಾರೆ.

*– ಮಾಸ್ತಿ ವೆಂಕಟೇಶ ಅಯ್ಯಂಗಾರ್*

* 'ಅವರು ಕನ್ನಡದ ಮೇಲೆ ಹೊಂದಿದ ಪ್ರಭುತ್ವವನ್ನೇ ಇಂಗ್ಲೀಷ್ ಭಾಷೆಯ ಮೇಲೆಯೂ ಹೊಂದಿದ್ದರು. ಅವರು ಕರ್ನಾಟಕದ ಹೊರಗೆ ಎಲ್ಲಿಯೇ ಹೋದರೂ ಅವರ ಮಾತಿನ ಮೋಡಿಗೆ ಮರುಳಾಗದವರು ಯಾರೂ ಇರಲಿಲ್ಲ. ಬಹುಶಃ ಅವರಷ್ಟು ದೇಶೀಯ ಹಾಗೂ ವಿದೇಶೀಯ ಸ್ನೇಹಿತನ್ನು ಹೊಂದಿದವರು ಕನ್ನಡ ಸಾರಸ್ವತ ಲೋಕದಲ್ಲಿ ಯಾರೂ ಇರಲಿಲ್ಲ. ಅವರು ನಿಜವಾಗಿಯೂ ಸಾಹಿತ್ಯ ರತ್ನವೇ ಆಗಿದ್ದರು.

  ***– ನಾಡೋಜ. ಡಾ. ಪಾಟೀಲ ಪುಟ್ಟಪ್ಪ***

* 'ಸಾಮಾಜಿಕ ಕ್ರಾಂತಿಗಾಗಿ ಹೋರಾಡುವ ಅನೇಕ ನಾಮಾಂಕಿತ ಲೇಖಕರಲ್ಲಿ ಶ್ರೀ ಅ.ನ.ಕೃಷ್ಣರಾಯರು ಮೊದಲಿನಿಂದ ಒಬ್ಬರಾಗಿದ್ದಾರೆ.

  ***– ಡಾ. ವಿ.ಕೃ. ಗೋಕಾಕ್***

* 'ಕನ್ನಡಿಗರಲ್ಲಿ ಆತ್ಮವಿಶ್ವಾಸ, ನಾಡಪ್ರೇಮ, ರಾಷ್ಟ್ರಪ್ರೇಮ ಇವು ಉಜ್ವಲವಾಗಿ ಬೆಳಗಲು ಅ.ನ.ಕೃ ಚಳುವಳಿ ಕಾರಣವೆಂಬಲ್ಲಿ ಅನುಮಾನವೇ ಇಲ್ಲ. ನನಗಂತೂ ಅವರ ಹೆಸರು ಒಂದು ಸ್ಫೂರ್ತಿಯ ನೆಲೆ.

  ***– ಡಾ. ಎಂ. ಚಿದಾನಂದ ಮೂರ್ತಿ***

❐

## ಶತಮಾನೋತ್ಸವ ಸ್ಮರಣೆ



ಡಾ|| ಜಿ.ಪಿ. ರಾಜರತ್ನಂ
(೦೫-೧೨-೧೯೦೮ ರಿಂದ ೧೩-೦೩-೧೯೭೯)

# 'ಕನ್ನಡರತ್ನ' ಜಿ.ಪಿ. ರಾಜರತ್ನಂ

● *ಡಾ. ನಾ. ಗೀತಾಚಾರ್ಯ*

ಕನ್ನಡ ಸಾಹಿತ್ಯಲೋಕದಲ್ಲಿ ವಿಭಿನ್ನ ಶೈಲಿಯ ಕಾವ್ಯ ಸೃಷ್ಟಿಸಿದ ರಾಜರತ್ನಂ ಅವರದು ವಿಶಿಷ್ಟ ವ್ಯಕ್ತಿತ್ವದ ಬಹುಮುಖ ಪ್ರತಿಭೆ. ಜನಪ್ರಿಯ ಮಕ್ಕಳ ಸಾಹಿತಿಯಾಗಿ ಭಿನ್ನಮನೋಭಾವದ ಕವಿಯಾಗಿ, ನಾಟಕಕಾರರಾಗಿ, ಶ್ರೇಷ್ಠಚಿಂತಕರಾಗಿ ಎಲ್ಲಕ್ಕಿಂತ ಮಿಗಿಲಾಗಿ ಸಾಹಿತ್ಯ ಪರಿಚಾರಕರಾಗಿ ಸರ್ವಧರ್ಮಸಮನ್ವಯಕಾರರಾಗಿ ಮಾನವ ಧರ್ಮದ ಶ್ರೇಷ್ಠತ್ವವನ್ನು ಎತ್ತಿ ಹಿಡಿದ ಪ್ರಾಜ್ಞ ವ್ಯಕ್ತಿತ್ವ ಅವರದು. ನೂರಾರು ವಿಚಾರಪೂರ್ಣ ಸಾಹಿತ್ಯಕೃತಿಗಳನ್ನು ರಚಿಸಿ ಸಾವಿರಾರು ಬೋಧಪ್ರದ ಉಪನ್ಯಾಸ ಭಾಷಣಗಳನ್ನು ಮಾಡಿ ಇಡೀ ಕನ್ನಡ ನಾಡಿನಲ್ಲಿಯೇ ಆಕರ್ಷಣೆಯ ಕೇಂದ್ರ ಬಿಂದುವಾಗಿ ಕಂಚಿನ ಕಂಠದ ವಾಗ್ಝರಿಯಿಂದ ಎಂಥವರನ್ನೂ ತನ್ನತ್ತ ಸೆಳೆದುಕೊಳ್ಳುತ್ತಿದ್ದ ರಾಜರತ್ನಂ ಅವರ ಇರುವಿಕೆಯೇ ಒಂದು ವಿಶೇಷವಾದ ವಾತಾವರಣವನ್ನು ಸೃಷ್ಟಿಸುತ್ತಿತ್ತು. ಅವರು ಒಂದೆಡೆ ಇದ್ದರೆಂದರೆ ಅಲ್ಲಿ ಸಂಭ್ರಮದ, ಲವಲವಿಕೆಯ ಸಾಹಿತ್ಯದ ಹಬ್ಬ ನಿರ್ಮಾಣವಾಗುತ್ತಿತ್ತು. ಎತ್ತರದ ನಿಲುವಿನ ದುಂಡುಮುಖದ ಬೆಳ್ಳಿ ತಲೆಯ, ಹೊಳೆಯುವ ಹೊಂಬಣ್ಣದ, ಸುಂದರ ಕಾಯದ ಶ್ವೇತವಸ್ತ್ರಧಾರಿಯಾಗಿದ್ದ ರಾಜರತ್ನಂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಡೆದದ್ದೇ 'ರಾಜಮಾರ್ಗ' ವಾಯಿತು.

ಇಂತಹ ಅಪರೂಪದ ವ್ಯಕ್ತಿತ್ವದ ಜಿ.ಪಿ. ರಾಜರತ್ನಂ ಹುಟ್ಟಿದ್ದು ಮೈಸೂರಿನ ಅರಮನೆ ವೈದ್ಯರಾಗಿದ್ದ ಪ್ರಸಿದ್ಧ ಗುಂಡ್ಲುಪಂಡಿತ ವಂಶಕ್ಕೆ ಸೇರಿದ್ದ ಮಡಿವಂತ ಸಾತ್ವಿಕ ಶ್ರೀವೈಷ್ಣವ ಮತೀಯರಾದ ಗೋಪಾಲಕೃಷ್ಣ ಅಯ್ಯಂಗಾರ್ಯರ ಪುತ್ರರಾಗಿ; ಅವರು ಶಿಕ್ಷಕ

ವೃತ್ತಿಯಲ್ಲಿದ್ದ ಕ್ಲೋಸ್‌ಪೇಟೆ(ರಾಮನಗರ)ಯಲ್ಲಿ ಡಿಸೆಂಬರ್ ೫, ೧೯೦೮ರಲ್ಲಿ, ರಾಜಯ್ಯಂಗಾರ್ ಆಗಿ.

ಕೌಟುಂಬಿಕವಾಗಿ ಅಷ್ಟೇನೂ ಉತ್ತಮ ಸ್ಥಿತಿಯಲ್ಲಿರದಿದ್ದ ಬಾಲ್ಯ, ಎಳವೆಯಲ್ಲಿಯೇ ತಾಯಿಯನ್ನು ಕಳೆದುಕೊಂಡು ಅಜ್ಜಿಯ ಮಮತೆಯಲ್ಲಿ ಕಳೆಯಿತು. ಅದೂ ಮರೆಯಾದ ಮೇಲೆ ತಂದೆಯ ಪಾಲನೆಯಲ್ಲಿಯೇ ನಡೆಯಿತು. ಮೇಷ್ಟರಾಗಿದ್ದ ತಂದೆಯವರು ರಾಜರತ್ನಂ ಅವರ ವಿದ್ಯಾಭ್ಯಾಸದತ್ತ ವಿಶೇಷವಾದ ಗಮನವನ್ನೇ ಹರಿಸಿದರಾದರೂ ವರ್ಗವಾದಂತೆಲ್ಲ ವಿದ್ಯಾಭ್ಯಾಸ ಕೇಂದ್ರಗಳೂ ವಸತಿಯೊಂದಿಗೆ ಬದಲಾಗುತ್ತಿತ್ತು. ಮೈಸೂರಿನ ಬನುಮಯ್ಯ ಶಾಲೆಗೆ ಬಂದಾಗ ಮಗನಿಗೂ ಅಲ್ಲಿಯೇ ವಿದ್ಯಾಭ್ಯಾಸ ಮುಂದುವರಿಸಿದರು. ತಂದೆ ಜನಪ್ರಿಯ ಮೇಷ್ಟರಾಗಿದ್ದರೂ ಮಗ ತುಂಟನಾಗಿದ್ದ. ಶಾಲೆಯಲ್ಲಿ ಏನಾದರೊಂದು ಕೀಟಲೆ ಇರುತ್ತಲೇ ಇತ್ತು. ಇವರ ತುಂಟಾಟಕ್ಕೆ ರೋಸಿಹೋದ ಮೇಷ್ಟರೊಬ್ಬರು ವ್ಯಂಗ್ಯಕ್ಕೆ ಏನು ಮಹಾ'ರತ್ನ' ಎಂಬಧಾಟಿಯಲ್ಲಿ ಛೇಡಿಸಿದ್ದನ್ನೇ ನೆಪವಾಗಿಟ್ಟುಕೊಂಡು ಮಾರನೆಯ ದಿನ ರಾಜಯ್ಯಂಗಾರ್ ತನ್ನ ಹೆಸರಿನ ಅಯ್ಯಂಗಾರ್ ಬದಲಿಗೆ 'ರತ್ನಂ' ಎಂದು ಅಟೆಂಡೆನ್ಸ್‌ನಲ್ಲಿ ತಾನೇ ತಿದ್ದಿದ್ದುದೇ ಅವರ ಖಾಯಂ ಹೆಸರಾಗಿ ಉಳಿದುಬಂತು.

'ತುಂಟಮಕ್ಕಳು ಮಹಾ ಬುದ್ಧಿವಂತರಾಗುತ್ತಾರೆ' ಎಂಬ ನಾಣ್ನುಡಿಯಂತೆ ರಾಜರತ್ನಂ ಬೆಳೆಬೆಳೆಯುತ್ತಾ ಚುರುಕಿನ ಬುದ್ಧಿವಂತರಾಗಿರುವುದು ಸಹಜವೇ ಆಗಿದೆ. ಅದಕ್ಕೆ ಹಿನ್ನೆಲೆಯಾಗಿ ಕುಟುಂಬದ ಮಡಿವಂತಿಕೆ, ಶಿಸ್ತು, ಶ್ರದ್ಧೆ, ಧಾರ್ಮಿಕ ಭಕ್ತಿ, ಆಚರಣೆ, ಸಂಸ್ಕೃತ ಅಭ್ಯಾಸ, ಶ್ಲೋಕ–ಪ್ರಬಂಧ ಕಲಿಕೆ ಎಲ್ಲಕ್ಕಿಂತ ಮಿಗಿಲಾಗಿ ವಂಶಪಾರಂಪರ್ಯವಾಗಿ ಬಂದಿದ್ದ ಧೀಮಂತಿಕೆ, ಸಂಸ್ಕಾರಗಳ ಫಲದಿಂದ ಮತ್ತು ಸತತ ಅಭ್ಯಾಸದಿಂದ ಅಸ್ಖಲಿತ ಪ್ರೌಢಿಮೆಯನ್ನು ತಮ್ಮದಾಗಿಸಿಕೊಂಡರು. ಮುಂದೆ ಅದರಿಂದಲೇ ಪ್ರಸಿದ್ಧಿಗೆ ಬಂದರು. ಒಳಗೊಳಗೇ ಹೀಗೆ ವಿಶಿಷ್ಟ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತ ಆಸಕ್ತಿಮೂಡಿಸುವ ವಿಷಯದ ಪೂರಕ ಗ್ರಂಥಗಳನ್ನೆಲ್ಲ ಪರಿಶೋಧಿಸಿ ಅಪಾರ ಪಾಂಡಿತ್ಯ ಪ್ರತಿಭೆ–ಜ್ಞಾನ ಸಂಪಾದಿಸಿದರೂ ಅವರ ಅತಿಯಾದ ತಿಳಿವಳಿಕೆ ಅವರಿಗೆ ಬಿ.ಎ., ಎಂ.ಎ., ಪರೀಕ್ಷೆಗಳಲ್ಲಿ ಯಾವುದೇ ದರ್ಜೆಯನ್ನೂ ತಂದುಕೊಡಲಿಲ್ಲ. ಸಾಮಾನ್ಯ ದರ್ಜೆಯಲ್ಲಿ ಪಾಸಾದರೂ ಅಸಾಮಾನ್ಯ ದರ್ಜೆಗೆ ಏರಿದ ಮಹಾನುಭಾವರಿವರು.

೧೯೨೮ ರಿಂದ ೩೮ ರಾಜರತ್ನಂ ಅವರ ಬದುಕಿನಲ್ಲಿ ಒಂದು ಮರೆಯಲಾರದ ಘಟ್ಟ. 'ಹತ್ತುವರುಷ' ಎಂಬ ಆತ್ಮ ಕಥನವನ್ನೇ ಈ ಅವಧಿಯ ಘಟನಾವಳಿಗಳನ್ನಾಧರಿಸಿ ಬರೆದಿದ್ದಾರೆ. ಒಂದುಕಡೆ ಕೆಲಸಕ್ಕಾಗಿ ಅಲೆತ; ಇನ್ನೊಂದುಕಡೆ ಸಂಸಾರದಲ್ಲಿ ಒಂದೊಂದೇ ಆಧಾರಗಳ ಕಳೆತ; ಮತ್ತೊಂದು ಕಡೆ ಸಾಹಿತ್ಯದತ್ತ ಸೆಳೆತ. ಈ ತ್ರಿಕೋನ ಸಂಘರ್ಷದಲ್ಲಿ ರಾಜರತ್ನಂ ಗೆದ್ದು ರತ್ನರಾಜರಾದದ್ದು ಕನ್ನಡ ಸಾಹಿತ್ಯದ ಸುಯೋಗ.

ಪದವೀಧರರಾದರೆ ಸಾಕು, ಅದುತಾನೆ ಏಕೆ, ಎಲ್.ಎಸ್. ಪಾಸಾದರೆ ಸಾಕು, ಕರೆದು ಕೆಲಸ ಕೊಡುವ ಆ ಕಾಲದಲ್ಲೂ ಹಲವು ವರ್ಷಗಳವರೆಗೆ ರಾಜರತ್ನಂ ಕೆಲಸವಿಲ್ಲದೆ ಅಲೆಯಬೇಕಾಯಿತು. ಆಗಾಗ್ಗೆ ತಂದೆ ಬದಲಿಗೆ ಅವರ ಶಾಲೆಯಲ್ಲಿ ಮಗ ಮಾಸ್ತರಿಕೆ

ಮಾಡಿದ್ದುಂಟು. ಎಂ.ವಿ. ಗೋಪಾಲ ಸ್ವಾಮಿಯವರ ಶಿಶುವಿಹಾರದಲ್ಲಿ ಕೆಲ ಕಾಲ ಮಕ್ಕಳ ಮೇಷ್ಟರಾಗಿದ್ದರು. ಇದರ ಫಲವೇ ರಾಜರತ್ನಂ ಪ್ರಸಿದ್ಧ ಮಕ್ಕಳ ಸಾಹಿತಿಯಾಗಿ ಹೊರ ಹೊಮ್ಮಿದುದು. ಜಾತಕ ಕಥೆಗಳು, ತುತ್ತೂರಿ, ಕಡಲೆಪುರಿ, ಕಂದನ ಕಾವ್ಯಮಾಲೆ ಮುಂತಾದ ಉತ್ತಮ ಶಿಶು ಸಾಹಿತ್ಯ ಕೃತಿಗಳನ್ನು ಹೊರತಂದರು. ಕೆಲಸಕ್ಕಾಗಿ ಹೈದರಾಬಾದಿಗೂ ಹೋಗಿಬಂದರು. ಸ್ವಾತಂತ್ರ್ಯ ಚಳುವಳಿಯ ಆ ಅವಧಿಯಲ್ಲಿ ಅದರಲ್ಲಿ ನೇರವಾಗಿ ತೊಡಗಿಕೊಳ್ಳದಿದ್ದರೂ ಅದರ ಪ್ರಭಾವದಿಂದ ತಪ್ಪಿಸಿಕೊಂಡಿರಲಿಲ್ಲ. ಖಾದಿಧಾರಿಯಾಗಿ ತಮ್ಮ ಸ್ವಾತಂತ್ರ್ಯದ ಬಯಕೆಯನ್ನು ತೋರ್ಪಡಿಸಿದ್ದರು. ಇದು ಹೈದರಾಬಾದಿನಲ್ಲಿ ಇವರನ್ನು ಉಳಿಯಗೊಡಲಿಲ್ಲ. ಇದು ಒಳ್ಳೆಯದೇ ಆಯಿತು. ರಾಜರತ್ನಂ ಅವರನ್ನು ಕನ್ನಡಕ್ಕೆ ಉಳಿಸಿಕೊಟ್ಟಿತು. ಬೆಂಗಳೂರಿನಲ್ಲಿ ಜನಗಣತಿ ಕಚೇರಿಯಲ್ಲಿ 'ಸಾರ್ಟರ್' ಕೆಲಸ ಖಾಲಿಯಿರುವುದು ತಿಳಿಯಿತು. ಅದರ ಅಧಿಕಾರಿಯನ್ನು ಹೋಗಿ ಕಂಡರು. ತೆರೆಯಿತು ಭಾಗ್ಯದಬಾಗಿಲು, ಕೆಲಸವೇನೋ ಸಿಕ್ಕಿತು. ಆದರೆ ಸಂಬಳತರುವ ಸಾರ್ಟರ್ ಹುದ್ದೆಯಲ್ಲ. ಹೆಸರು ತರುವ ಸಾಹಿತ್ಯರಚನೆಯ ಕೆಲಸ. ಆ ಅಧಿಕಾರಿ ಬೇರೆಯಾರೂ ಅಲ್ಲ ಮಾಸ್ತಿವೆಂಕಟೇಶ ಅಯ್ಯಂಗಾರ್. ಇವರ ಬಗ್ಗೆ ಈಗಾಗಲೆ ಕೇಳಿದ್ದ, ಇವರ ಆಸಕ್ತಿಯನ್ನು ನೋಡಿದ್ದ, ಮಾಸ್ತಿ ಇವರಿಗೆ ತಿಳಿಯ ಹೇಳಿ ತಾವೇ ಸಂಬಳ ಕೊಡುವುದಾಗಿ ತಿಳಿಸಿ ತಾವು ನಡೆಸುತ್ತಿದ್ದ ತಮ್ಮ 'ಜೀವನ' ಪತ್ರಿಕೆಗೆ ಲೇಖನ ಬರೆಸಿ, ವಿಮರ್ಶೆ ಬರೆಸಿ, ಬೌದ್ಧ ಸಾಹಿತ್ಯ ಗ್ರಂಥಗಳನ್ನು ಅನುವಾದ ಮಾಡಿಸಿ ಇವರ ಆರ್ಥಿಕ ಕೊರತೆಯನ್ನು ತುಂಬುತ್ತ ಬಂದರು ; ಇದರ ಫಲವಾಗಿ ಬೌದ್ಧಸಾಹಿತ್ಯ ಕನ್ನಡಕ್ಕೆ ಬಂದಿತು. 'ಬುಧನ ಜಾತಕಗಳು', 'ಧರ್ಮಾದಾನಿ ಬುದ್ಧ' ಮುಂತಾದ ಕೃತಿಗಳಲ್ಲದೆ 'ಗಂಡುಗೊಡಲಿ' ನಾಟಕ ಇವರಿಗೆ ಯಶಸ್ಸನ್ನು ತಂದುಕೊಟ್ಟಿತು. ಇದು ಮಡಿಕೇರಿ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸುವಂತೆ ಮಾಡಿ ಕೀರ್ತಿಯನ್ನೂ ತಂದುಕೊಟ್ಟಿತು. ಮಾಸ್ತಿಯವರು ಇವರ ಬದುಕಿನ ಬಡತನವನ್ನಲ್ಲ ತುಂಬಿದ್ದು, ಸಾಹಿತ್ಯ ರಚನೆಯ ಬಡತನವನ್ನು. ಈ ಸಾಹಿತ್ಯದ ಶ್ರೀಮಂತಿಕೆಯಲ್ಲಿ ರಾಜರತ್ನಂ ಅವರನ್ನು ಮೀರಿಸುವವರಿಲ್ಲದಂತೆ ಮಾಡಿತು.

ಇದೇ ಕಾಲದಲ್ಲಿ ರಾಜರತ್ನಂ ಅವರು ಕೌಟುಂಬಿಕವಾಗಿ ತುಂಬ ಬಳಲಿದ್ದರು. ಆಸರೆಯಾಗಿದ್ದ ತಂದೆ, ಆಧಾರವಾಗಬಲ್ಲ ಅಣ್ಣಂದಿರು ಕಾಲವಾದರು. ಈ ನಡುವೆಯೇ ಕೌಟುಂಬಿಕ ಒತ್ತಾಸೆಯಿಂದ ಮದುವೆಯೂ ಆಗಿತ್ತು. ಅದೂ ಸುಖ ತರಲಿಲ್ಲ, ಸ್ವಲ್ಪ ಸಮಯದಲ್ಲೇ ಹೆಂಡತಿ ಲಲಿತ ಅನಾರೋಗ್ಯಕ್ಕೊಳಗಾಗಿ ಸಾವಿನಲ್ಲಿ ಲೀನವಾದರು. ಬದುಕೇ ಬೇಡವೆನಿಸಿದ್ದವರನ್ನು ಒಲಿಸಿ ಒತ್ತಾಸೆ ನೀಡಿ ಬಂಧುಗಳು ಸೀತಮ್ಮನವರನ್ನು ತಂದು ಎರಡನೆಯ ಮದುವೆಯನ್ನು ಮಾಡಿಸಿದರು. ಇದು ಸ್ವಲ್ಪಮಟ್ಟಿಗೆ ದಾಂಪತ್ಯ ಸಂತೋಷವನ್ನು ಮಾನಸಿಕ ನೆಮ್ಮದಿಯನ್ನು ನೀಡಿದುದರ ಕಾರಣದಿಂದ; ಅತ್ತ ಸಾಹಿತ್ಯಾಸಕ್ತಿ ಒಲಿದುದರ ಫಲದಿಂದ ರಾಜರತ್ನಂ ಅವರಲ್ಲಿ ಜೀವನಾಸಕ್ತಿ ಮೊಳಕೆಯೊಡೆದು ಸಾಹಿತ್ಯ ವಿದ್ಯಾರ್ಥಿಯಾಗಿ ಮರಳಿದರು. ಸಾಹಿತ್ಯವಲಯದಲ್ಲಿ ಆಗುತ್ತಿದ್ದ ಬದಲಾವಣೆಗಳನ್ನೆಲ್ಲ ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಆಗಿನ ಪ್ರಗತಿಶೀಲ ಸಾಹಿತ್ಯ ಚಳವಳಿಯ ಹೊಸ ಭಾವನೆಗಳಿಗೆ ತಮ್ಮ ಬದುಕಿನಲ್ಲಾದ ಅನಿಶ್ಚಿತತೆಯ ಹಿನ್ನೆಲೆಯಲ್ಲಿ ಶ್ರಮಜೀವಿಗಳ, ಕಷ್ಟ ಜೀವಿಗಳ, ಶೋಷಿತ ವರ್ಗದ, ಕಾರ್ಮಿಕರ ನೋವು,

ಸಂಕಟ ಹೇಗಿರಬಹುದೆಂಬುದನ್ನು ಗ್ರಹಿಸಿ ಅವರಿಗೆ ಧ್ವನಿಯಾದರು. ಅವರ ನೋವು ಮರೆಯುವ ದಿವ್ಯಔಷಧಿ ಕುಡಿತದ ಅಮಲಿನ ಭಾಷೆಯನ್ನು ತಮ್ಮ ಕಾವ್ಯಭಾಷೆಯನ್ನಾಗಿಸಿಕೊಂಡರು. ಪ್ರತಿದಿನ ಹೆಂಡತಿಯಿದ್ದ ಆಸ್ಪತ್ರೆಗೆ ಹೋಗಿಬರುವ ದಾರಿಯಲ್ಲಿನ ಕುಡುಕರ ಭಾಷೆ, ಭಾವನೆ, ವರ್ತನೆಗಳನ್ನು ಮನನಮಾಡುತ್ತ ಅದೇ ಭಾಷೆಯಲ್ಲಿ ಕಾವ್ಯ ಬರೆದರೆ ಅವರಿಗೆ ಮುಟ್ಟಬಹುದು, ಅವರಲ್ಲಿ ಪರಿವರ್ತನೆಯಾಗಬಹುದು ಎಂದು ಭಾವಿಸಿದರು. ಜೊತೆಗೆ ಹೊಸ ಬದಲಾವಣೆಯ ಸಾಹಿತ್ಯಕ್ಕೆ ಇದು ಸಂವಾದಿಯೂ ಆಗಬಲ್ಲದೆಂದು ಅರಿತರು. ಅದರ ಪರಿಣಾಮವಾಗಿ 'ರತ್ನನಪದಗಳು' ಕನ್ನಡಕ್ಕೆ ಬಂದಿತು. ಅದರ ಜಯಭೇರಿಯಿಂದ 'ನಾಗನಪದಗಳನ್ನೂ' ರಚಿಸಿದರು. ಕನ್ನಡ ಸಾಹಿತ್ಯ ಲೋಕದಲ್ಲಿಯೇ ಇದೊಂದು ವಿಶಿಷ್ಟವಾದ ಕಾವ್ಯ ಭಾಷೆಯಾಯಿತು, ಭಾವಾಭಿವ್ಯಕ್ತಿಯಾಯಿತು. ಮಾಸ್ತಿ, ಬೇಂದ್ರೆ, ಕುವೆಂಪುರಂತಹವರ ತಣ್ಣನೆಯ ಸಮೃದ್ಧ ಕಾವ್ಯದ ಸೊಗಸಿಗೆ – ಕೆ.ಎಸ್. ನರಸಿಂಹಸ್ವಾಮಿಯವರ ಕಚಗುಳಿಯಿಡುವ ದಾಂಪತ್ಯ ಪ್ರೇಮಗೀತೆಗಳಿಗೆ ಮಾರುಹೋಗಿದ್ದ ಕನ್ನಡ ಓದುಗ ಇವರ ಈ ಹೊಸ ರೀತಿಯ ಬೆಚ್ಚಗಿನ ಅಮಲಿನ ಗೀತೆಗಳಿಗೆ ಅವಾಕ್ಕಾದ, ರೋಮಾಂಚಿತಗೊಂಡ. ಈ ಹೊಸ ಬಗೆಯ ಪ್ರಯೋಗ ದಿಂದ ರಾಜರತ್ನಂ ಕನ್ನಡ ಕಾವ್ಯ ಜಗತ್ತಿನಲ್ಲಿ ಮುಖ್ಯಸ್ಥಾನವನ್ನು ಪಡೆಯುವಂತಾಯಿತು. ಪ್ರಗತಿಶೀಲ ಸಾಹಿತ್ಯದ ಪ್ರಮುಖ ಕವಿಗಳೆನಿಸಿದರು.

ಆದರೂ ಇವರಿಗೆ ಬದುಕಿನಲ್ಲಿ ನಿಶ್ಚಿತ ಆಸರೆ ದೊರಕದೆ ಕೆಲವುಕಾಲ ನಿಟ್ಟೂರು ಶ್ರೀನಿವಾಸರಾಯರು ನಡೆಸುತ್ತಿದ್ದ ಸತ್ಯಶೋಧನ ಪ್ರಕಟನಾಲಯದಲ್ಲಿ ಪುಸ್ತಕ ಮಾರಾಟ ಮಾಡುವ ಕೆಲಸದಲ್ಲಿ ತೊಡಗಿದ್ದರು. ಇದರಿಂದ ಸಾಹಿತ್ಯ ಪರಿಚಾರಿಕೆಯ ಯೋಗ ಲಭಿಸಿತು. ೧೯೪೨ರ ಸುಮಾರಿನಲ್ಲಿ ಗಾಂಧಿ ಸಾಹಿತ್ಯ ಸಂಘದಲ್ಲಿ ಹಲವು ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಈ ಪರಿಚಾರಿಕೆಯ ಕೆಲಸವನ್ನು ಅಲ್ಲಿ ಗಟ್ಟಿಗೊಳಿಸಿಕೊಂಡರು. ಮುಂದೆ ಜೀವಿತದ ಕೊನೆಯವರೆಗೂ ಸಾಹಿತ್ಯ ಪರಿಚಾರಿಕೆಯನ್ನು ಮುಖ್ಯ ಹವ್ಯಾಸವಾಗಿ ಮಾಡಿಕೊಂಡರು. ಅದರ ಮೂಲಕವೂ ರಾಜರತ್ನಂ ಅವರನ್ನು ಗುರುತಿಸುವಂತಾಯಿತು. ಹೋದಲ್ಲೆಲ್ಲ ಉತ್ತಮ ಪುಸ್ತಕಗಳನ್ನು ಪರಿಚಯಿಸುತ್ತ, ವಿತರಿಸುತ್ತ ನಾಡು ನುಡಿಯ ಬಗ್ಗೆ ಭಾಷಣ ಮಾಡುತ್ತ ಸಾಹಿತ್ಯ ಸಂಸ್ಕೃತಿಯ ವಾಹಕರಾಗಿ ಹೆಸರಾದರು.

ಕೊನೆಗೂ ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ ಹುದ್ದೆ ದೊರಕುವ ಮೂಲಕ ಒಂದು ನಿಶ್ಚಿತ ಬದುಕು ರೂಪಗೊಂಡಿತು. ೧೯೩೮ರಿಂದ ಆರಂಭವಾದ ಈ ಸೇವೆ ಮೈಸೂರು, ತುಮಕೂರು, ಶಿವಮೊಗ್ಗಗಳಲ್ಲಿ ಮುಂದುವರೆದು ೧೯೫೨ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಬಂದು, ನಿವೃತ್ತಿಯವರೆಗೆ (೧೯೬೪) ಅಲ್ಲೇ ಇದ್ದರು. ಮೊದಲೇ ತೀವ್ರಕ್ರಿಯಾವಂತ ರಾದ ರಾಜರತ್ನಂ ಏನಾದರೊಂದನ್ನು ಮಾಡುತ್ತಲೇ ಇದ್ದವರು, ಈಗ ನೆಮ್ಮದಿಯ ಸ್ಥಿತಿಯಿರುವಾಗ ಇತರರಂತೆ ಸುಮ್ಮನಾಗಲಿಲ್ಲ, ಇನ್ನಷ್ಟು ಕ್ರಿಯಾಶೀಲರಾದರು. ಆಚಾರ್ಯ ಬಿ.ಎಂ.ಶ್ರೀಯವರು ಆರಂಭಿಸಿದ್ದ ಕನ್ನಡ ನಾಡು–ನುಡಿ ಕಟ್ಟುವ ಕಾಯಕವನ್ನು ಮುಂದು ವರಿಸಿದರು. ಹೋದಲ್ಲೆಲ್ಲ ಕರ್ನಾಟಕ ಸಂಘ ಕಟ್ಟಿ ವಿದ್ಯಾರ್ಥಿ–ಅಧ್ಯಾಪಕರನ್ನು ಒಟ್ಟುಗೂಡಿಸಿ ಕನ್ನಡ ವಾತಾವರಣ ರೂಪಿಸುತ್ತಿದ್ದರು. ನಾಟಕ ಉಪನ್ಯಾಸ–ಸಭೆಗಳನ್ನು ನಡೆಸಿ ಸಾಹಿತ್ಯಾಸಕ್ತಿ

ಮೂಡಿಸುತ್ತಿದ್ದರು. ವಿದ್ಯಾರ್ಥಿಗಳಿಗೆ ಪಠ್ಯಗಳಿಗೆ ಪೂರಕವಾದ ಟಿಪ್ಪಣಿ-ವಿವರಣೆಗಳ ಕಿರು ಪುಸ್ತಕಗಳನ್ನು ಸಿದ್ಧಪಡಿಸಿ ಓದನ್ನೂ ಸುಲಭಮಾಡುತ್ತಿದ್ದರು.

ಬೆಂಗಳೂರಿನಲ್ಲಂತೂ ಎ.ಆರ್. ಕೃಷ್ಣಾಶಾಸ್ತ್ರಿಗಳಿಂದ ಆರಂಭವಾಗಿ ಕ್ರಿಯಾಶೀಲವಾಗಿದ್ದ ಸರ್ಕಾರಿ ಕಾಲೇಜಿನ ಕರ್ನಾಟಕ ಸಂಘವನ್ನು ಸಕ್ರಿಯಗೊಳಿಸಿ ನಿರಂತರ ಚಟುವಟಿಕೆಗಳಿಂದ ಲವಲವಿಕೆಯಿಂದಿರಿಸಿದ್ದರು. ಸಾಹಿತ್ಯ ಪರಿಚಾರಿಕೆಯನ್ನು ಮನೆಮಾತಾಗಿಸುವಷ್ಟು ಪ್ರಭಾವಶಾಲಿಯಾಗಿ ರೂಢಿಸಿದ್ದರು. ಸಂಘದಿಂದ ೩೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿ ಅನೇಕ ಹೊಸ ಹೊಸ ವಿದ್ಯಾರ್ಥಿ ಲೇಖಕರನ್ನು ಬೆಳೆಸಿದ್ದಲ್ಲದೆ ಪ್ರಸಿದ್ಧ ಕವಿಗಳನ್ನು ಪರಿಚಯಿಸಿದರು.

ರಾಜರತ್ನಂ ಅವರು ಹೆಚ್ಚಾಗಿಯೇ ಬರೆದಿದ್ದರೂ ಪ್ರಸಿದ್ಧಿಗೆ ಬಂದದ್ದು ಬರೆಹದ ಮೂಲಕಕ್ಕಿಂತ ಉಪನ್ಯಾಸಗಳ ಮೂಲಕ. ಅವರ ಕಂಚಿನ ಕಂಠಕ್ಕೆ ಮಾರುಹೋಗದವರಿಲ್ಲ. ತರಗತಿಯಲ್ಲಿ ರಾಜರತ್ನಂ ಉಪನ್ಯಾಸ ಮಾಡುತ್ತಿದ್ದರೆಂದರೆ ವಿದ್ಯಾರ್ಥಿಗಳು ಕಿಕ್ಕಿರಿದು ತುಂಬಿರುತ್ತಿದ್ದರು. ಅದರಲ್ಲಿ ಅವರ ತರಗತಿಯವರಿಗಿಂತ ಬೇರೆಯ ತರಗತಿಯವರೇ ಹೆಚ್ಚಿರುತ್ತಿದ್ದರು. ಅಲ್ಲಿ ನಿಶ್ಶಬ್ದ ಆವರಿಸಿರುತ್ತಿತ್ತು. ಸಭೆ ಸಮಾರಂಭಗಳಲ್ಲಿ ಸಭಾಂಗಣ ತುಂಬಿರುತ್ತಿತ್ತು. ರಸ್ತೆಯಲ್ಲಿ ಹೋಗುತ್ತಿದ್ದವರೆಲ್ಲ ಅಲ್ಲೆ ನಿಂತು ಕೇಳುತ್ತಿದ್ದರು. ಈ ಬಗೆಯ ಅಯಸ್ಕಾಂತೀಯ ಗುಣ ರಾಜರತ್ನಂ ಅವರಿಗಿತ್ತು. ಅದು ಕಂಠದ ಆಕರ್ಷಣೆಯೊಂದೇ ಅಲ್ಲದೆ ವಿಷಯದ ವಿಸ್ತಾರ, ಜೀವನಾನುಭವ, ಆಳವಾದ ಅಧ್ಯಯನ, ಮಾನವೀಯತೆಯ ಮಾಧುರ್ಯ, ಅಸ್ಖಲಿತ ಧ್ವನಿ, ನಿರರ್ಗಳತೆಗಳಿಂದ ಕೂಡಿರುತ್ತಿತ್ತು. ಅವರ ಧ್ವನಿಯನ್ನು ಕೇಳಿದವರು ಎಂದಿಗೂ ಮರೆಯಲಾಗದಂತಹ ಮೋಡಿ ಅದರಲ್ಲಿರುತ್ತಿತ್ತು.

೧೯೭೯ರಲ್ಲೊಮ್ಮೆ ಅಸ್ವಸ್ಥರಾಗಿದ್ದ ರಾಜರತ್ನಂ ಚೇತರಿಸಿಕೊಂಡ ಮೇಲೆ ಧಾರ್ಮಿಕ ಸಾಹಿತ್ಯದತ್ತ ಒಲವು ಮೂಡಿಸಿಕೊಂಡಿದ್ದರು. ೧೩-೦೩-೧೯೭೯ರಂದು ವಿಶಿಷ್ಟ ವ್ಯಕ್ತಿತ್ವದ ರಾಜರತ್ನಂ ಮಲ್ಲೇಶ್ವರಂನ ತಮ್ಮ ಮನೆ - ಪ್ರಕಟನಾಲಯ 'ಶಾಕ್ಯ ಸಾಹಿತ್ಯ ಮಂಟಪ'ದಲ್ಲಿ ಅಸುನೀಗಿದರು.

ರಾಜರತ್ನಂ ಅವರಿಗೆ ಸಂದ ಪ್ರಶಸ್ತಿ, ಸನ್ಮಾನ, ಸಮ್ಮೇಳನ, ಗೌರವಗಳು ಹತ್ತು ಹಲವು. ಮಡಕೇರಿ ಸಮ್ಮೇಳನದಿಂದ ಆರಂಭವಾದ ಈ ಗೌರವ ೧೯೩೮ರ ಬಳ್ಳಾರಿ ಸಾಹಿತ್ಯ ಸಮ್ಮೇಳನ, ೧೯೪೫ರ ರಬಕವಿ, ೧೯೭೬ರ ಕಾರ್ಕಳ ಸಾಹಿತ್ಯ ಸಮ್ಮೇಳನಗಳಲ್ಲಿ ಗೋಷ್ಠಿಗಳ ಅಧ್ಯಕ್ಷರಾಗಿದ್ದರು. ೧೯೭೮ರಲ್ಲಿ ದೆಹಲಿಯಲ್ಲಿ ನಡೆದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಜಿ. ನಾರಾಯಣ ಅವರ ನೇತೃತ್ವದಲ್ಲಿ ಹೊರನಾಡಿನಲ್ಲಿ ಕನ್ನಡದ ಸಾರಥ್ಯವನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದ್ದರು. ಇವರ ಈ ಅಧ್ಯಕ್ಷಭಾಷಣ ಕೇಳಿದವರ ಮನಸ್ಸಿನಲ್ಲಿ ಇಂದಿಗೂ ಅದರ ನೆನಪು ಪ್ರತಿಧ್ವನಿಸುವಂತಿದೆ.

೧೯೭೯ರಲ್ಲಿ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ, ೧೯೭೦ರಲ್ಲಿ ರಾಜ್ಯೋತ್ಸವ ಪ್ರಶಸ್ತಿ, ೧೯೭೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಗೌರವಡಾಕ್ಟರೇಟ್ ಪ್ರಶಸ್ತಿಗಳು ರಾಜರತ್ನಂ ಕೊರಳಲ್ಲಿ ರತ್ನಹಾರವಾಗಿದ್ದರೆ; ಸಾರ್ವಜನಿಕರು, ಸಂಘ ಸಂಸ್ಥೆಗಳ ಸನ್ಮಾನಗಳು ಅನೇಕ.

೧೯೭೭ರಲ್ಲಿ ಅಭಿಮಾನಿಗಳು, ಸಾರ್ವಜನಿಕರಿಂದ 'ರಾಜಮಾರ್ಗ' ಅಭಿನಂದನ ಸಂಪುಟ ಸಮರ್ಪಣೆ ಅವರ ಸೇವೆಗೆ ಸಂದ ದೊಡ್ಡ ಗೌರವ.

ರಾಜರತ್ನಂ ಅವರ ಸಾಹಿತ್ಯ ವಿವಿಧ ಮುಖವಾದದ್ದು. ಹತ್ತು ಹಲವು ಪ್ರಕಾರಗಳಲ್ಲಿ ಅಗಾಧ ಸಾಹಿತ್ಯ ರಚಿಸಿದ್ದಾರೆ. ಕಾವ್ಯ ೬, ಕಥೆ ೫, ನಾಟಕ ೪, ವಿಡಂಬನೆ ೫, ಭಾಷಣಗಳು ಲೇಖನಗಳು ೧೩, ನೆನಪು, ಆತ್ಮಕಥೆ ೫, ಮಕ್ಕಳ ಸಾಹಿತ್ಯದಲ್ಲಿ ಕವನಸಂಕಲನ ೧೨, ಕಥೆ ೫೫, ಜೀವನ ಚರಿತ್ರೆ ೧೧, ನಾಟಕ ೧೧, ಇತರೆ ೩; ಧಾರ್ಮಿಕ ಸಾಹಿತ್ಯದಲ್ಲಿ ಬೌದ್ಧ ಸಾಹಿತ್ಯ ೨೩, ಜೈನಸಾಹಿತ್ಯ ೬, ವಿಷ್ಣುಭಕ್ತಿ ಸಾಹಿತ್ಯ ೨೧, ಇಸ್ಲಾಧರ್ಮ ಸಾಹಿತ್ಯ ೧, ಸಾಮಾನ್ಯ ಧರ್ಮನೀತಿ ೧೪, ಸತ್ಯಸಾಯಿಧರ್ಮ ೧೧, ವೈಚಾರಿಕ ವಿಭಾಗದಲ್ಲಿ ವಿಚಾರಸಾಹಿತ್ಯ ೧೫, ಗಾಂಧಿಸಾಹಿತ್ಯ ೮, ಕವಿಕಾವ್ಯ ವಿಚಾರ ೨೦, ಕೈಲಾಸಂ ಸಾಹಿತ್ಯ ೧೫, ಹೀಗೆ ೩೦ ಕ್ಕೂ ಹೆಚ್ಚು ಸಾಹಿತ್ಯ ಪ್ರಕಾರಗಳಲ್ಲಿ ರಾಜರತ್ನಂ ಕೈಯಾಡಿಸಿದ್ದಾರೆ. ವಿಷ್ಣುಭಕ್ತಿ ಸಾಹಿತ್ಯದಲ್ಲಿ ಶ್ರೀವೈಷ್ಣವ ಸಾಹಿತ್ಯದ ಶ್ರೇಷ್ಠಕೃತಿಗಳನ್ನು ಕನ್ನಡಕ್ಕೆ ತರುವಲ್ಲಿ ಮಾಸ್ತಿ, ಪು.ತಿ.ನ. ಅವರೊಂದಿಗೆ ರಾಜರತ್ನಂ ಪಾಲುದಾರರಾಗಿದ್ದಾರೆ. 'ತಿರುಪ್ಪಾವೈ', 'ಕಣ್ಣಿನುಣ್ಣುಶಿರುತ್ತಾಂಬು', 'ಪ್ರಾಣೇಶ್ವರಪ್ರಾಪ್ತಿ', 'ಮುಕುಂದಮಾಲಾ' ಮುಂತಾದವು ಮುಖ್ಯವಾಗಿವೆ. ಆದರೂ ಇವುಗಳಲ್ಲಿ ಮಾಸ್ತಿ, ಪು.ತಿ.ನ. ಅವರಂತೆ ಕನ್ನಡಕ್ಕೆ ಅನುವಾದಮಾಡದೆ ಮೂಲಕ್ಕೆ ಪ್ರತಿಪದಾರ್ಥ, ಸುಂದರ ವ್ಯಾಖ್ಯಾನ ನೀಡುವುದರಲ್ಲೇ ನಿಂತುಬಿಡುತ್ತಾರೆ. ಮಾಸ್ತಿಯವರಿಂದ ಬೌದ್ಧ ಸಾಹಿತ್ಯವನ್ನು ಕನ್ನಡಕ್ಕೆ ಕೊಡುವ ಕಾಯಕದಲ್ಲಿ ತೊಡಗಿಸಿಕೊಂಡ ರಾಜರತ್ನಂ ಅನಂತರ ಅದನ್ನು ಅಷ್ಟಕ್ಕೇ ನಿಲ್ಲಿಸದೆ ಮುಂದೆ ಜೈನ, ಇಸ್ಲಾಂಗಳತ್ತ ಹೊರಳಿ ಉತ್ತಮ ಸಾಹಿತ್ಯಕೃತಿಗಳನ್ನು ನೀಡಿದ್ದಾರೆ. 'ಪ್ರಶ್ನೋತ್ತರ ರತ್ನಮಾಲೆ', 'ಮಹಾವೀರನ ಮಾತುಕತೆ' ಮುಂತಾದ ೬ ಜೈನ ಸಾಹಿತ್ಯಕೃತಿಗಳನ್ನು ರಚಿಸಿದ್ದು ಅವರು ನಿಧನರಾದ ನಂತರ ಶಾಕ್ಯಸಾಹಿತ್ಯ ಮಂಟಪ ಅವನ್ನೆಲ್ಲ ಒಂದೇ ಸಂಪುಟದಲ್ಲಿ ಸಿದ್ಧಪಡಿಸಿದೆ.

ತಾವು ಅಸ್ವಸ್ಥರಾಗಿದ್ದಾಗ ಸಾಯಿಧರ್ಮದತ್ತ ಮನಸ್ಸು ಹೊರಳಿ 'ಶ್ರೀಸಾಯಿಚಿಂತನ', 'ಶ್ರೀಸಾಯಿ ಸರಸ್ವತಿ', 'ಸಾಯಿ ಮಹಾಪರ್ವ', ಮುಂತಾದ ೧೧ ಸಾಯಿಧರ್ಮ ಸಾಹಿತ್ಯಕೃತಿ ರಚಿಸಿರುವುದಲ್ಲದೆ 'ಇಸ್ಲಾಂ ಧರ್ಮದ ಪರಿಮಳ' ಎಂಬ ಇಸ್ಲಾಂ ಸಾಹಿತ್ಯವನ್ನೂ ಸಾಮಾನ್ಯಧರ್ಮ – ನೀತಿಗೆ ಸಂಬಂಧಿಸಿದ 'ಬೆಳಕಿನದಾರಿ', 'ಮಾಕ್ಲೈಬ್ಯಂ', 'ಸರ್ವದೇವ ನಮಸ್ಕಾರ', 'ಜ್ಞಾನ ಸೂರ್ಯ', ಮುಂತಾದ ೧೪ ಕೃತಿಗಳನ್ನೂ ರಚಿಸಿ ಭಾರತದ ಸನಾತನ ಧರ್ಮ–ಸಂಸ್ಕೃತಿಯಲ್ಲಿರುವ ಜೀವನ ಸಾರ, ಮೌಲ್ಯ, ಚಿಂತನೆಗಳನ್ನು ತಮ್ಮದೇ ಆದ ವಿಶೇಷವಾದ ಧಾಟಿಯಲ್ಲಿ ವಿಚಾರಮಾಡಿದ್ದಾರೆ.

'ವಿಚಾರ ರಶ್ಮಿ' ರಾಜರತ್ನಂ ಅವರ ಪ್ರಮುಖ ಸಾಹಿತ್ಯಕೃತಿಯಾಗಿದೆ. ಇದರಲ್ಲಿ ಸಾರ್ವಕಾಲಿಕವಾದ ಮತ್ತು ಸಮಕಾಲೀನ – ಸಾಮಾಜಿಕ ಮೌಲ್ಯಗಳ ಭಾವಸ್ಪಂದನವಿದೆ. ಸುಧಾ ವಾರಪತ್ರಿಕೆಯಲ್ಲಿ 'ಭ್ರಮರ' ಎಂಬ ಹೆಸರಿನಲ್ಲಿ ತಾವಿರುವವರೆಗೂ ನಿರಂತರವಾಗಿ ಚಿಂತನೆಗಳನ್ನು 'ವಿಚಾರರಶ್ಮಿ' ಹೆಸರಿನಲ್ಲಿ ಬರೆಯುತ್ತಿದ್ದುದು ಅದೇ ಹೆಸರಿನಲ್ಲಿ ಪುಸ್ತಕವಾಗಿದೆ. 'ದೊಡ್ಡವರ ದಾರಿ', 'ಕನ್ನಡದ ಸೇತುವೆ', 'ವಿಚಾರತರಂಗ' ಮುಂತಾದ ಹಲವು ಮೌಲಿಕ

ಕೃತಿಗಳನ್ನು ಕೊಟ್ಟಿರುವ ರಾಜರತ್ನಂ ಭಾರತ ಕಂಡಿರುವ ಶ್ರೇಷ್ಠ ಚಿಂತಕರ ಸಾಲಿನಲ್ಲಿ ಸೇರುವಂಥವರು. ಹಾಗೆಯೇ ಗಾಂಧಿಸಾಹಿತ್ಯ ರಾಜರತ್ನಂ ಅವರ ಉಸಿರಾಗಿ 'ಗಾಂಧಿಗಾಯಿತ್ರಿ', 'ದೇವರ ಸಾಕ್ಷಿ ಗಾಂಧೀಜಿ', 'ಗಾಂಧಿಶಕ್ತಿಯ ಮೂಲ' ಮುಂತಾದ ೮-೧೦ ಗಾಂಧೀಜಿ ಕುರಿತ ಕೃತಿಗಳನ್ನು ರಚಿಸಿ ರಾಷ್ಟ್ರಭಕ್ತಿಯನ್ನು ಪ್ರಕಟಿಸಿದ್ದಾರೆ.

ಕಥೆ, ಕವನ, ನಾಟಕ, ವಿಡಂಬನೆ, ಮಕ್ಕಳಸಾಹಿತ್ಯ, ಜೀವನಚರಿತ್ರೆ, ಧಾರ್ಮಿಕ ಸಾಹಿತ್ಯ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ರಾಜರತ್ನಂ ಒಟ್ಟು ೨೬೦ಕ್ಕೂ ಹೆಚ್ಚು ಕೃತಿಗಳನ್ನು ನೀಡಿದ್ದಾರೆ. ಇವೆಲ್ಲ ಬಹೂಪಯೋಗಿ ಸಾಹಿತ್ಯವಾಗಿವೆ. ವಿಮರ್ಶಕರ ದೃಷ್ಟಿಯಲ್ಲಿ ರಾಜರತ್ನಂ ಪ್ರಗತಿಶೀಲ ಸಾಹಿತ್ಯ ಪ್ರಕಾರದಲ್ಲಿ ನಿಲ್ಲುತ್ತಾರೆ. ಎಲ್ಲ ವಿಮರ್ಶಕರೂ ರಾಜರತ್ನಂ ಅವರ ಸಾಹಿತ್ಯವನ್ನು ಮುಖ್ಯವಾಗಿ ಉಲ್ಲೇಖಿಸುತ್ತಾರೆ.

ರಾಜರತ್ನಂ ಅವರ ಎಲ್ಲ ಕೃತಿಗಳೂ ಮೌಲಿಕವಾದವುಗಳೇ, 'ಗಂಡುಗೊಡಲಿ' ನಾಟಕ, 'ಪುರುಷ ಸರಸ್ವತಿ' ವಿಡಂಬನ ಸಾಹಿತ್ಯ, ಕಾವ್ಯವಾಗಿ 'ರತ್ನನ ಪದಗಳು'–'ನಾಗನ ಪದಗಳು', ಮತ್ತು ಮಕ್ಕಳ ಸಾಹಿತ್ಯ ಕೃತಿಗಳು ರಾಜರತ್ನಂ ಅವರನ್ನು ಕನ್ನಡ ಸಾಹಿತ್ಯದಲ್ಲಿ ಶಾಶ್ವತವಾಗಿ ಉಳಿಸುವಂತಹ ಶ್ರೇಷ್ಠ ಕೃತಿಗಳಾಗಿವೆ. ಪಂಜೆ–ಹೊಯ್ಸಳ ಮುಂತಾದವರ ಸಾಲಿನಲ್ಲಿ ಉತ್ಕೃಷ್ಟ ಮಕ್ಕಳ ಸಾಹಿತ್ಯವನ್ನು ಕನ್ನಡಕ್ಕೆ ನೀಡಿದ ಕೀರ್ತಿ ರಾಜರತ್ನಂ ಅವರದು. 'ಕೈಲಾಸಂ'ಅವರ ಬಗೆಗೆ ಒಬ್ಬರೇ ಸುಮಾರು ೧೫ ಕೃತಿಗಳನ್ನು ಬರೆದು ಕೈಲಾಸಂಅವರನ್ನು ಶ್ರೇಷ್ಠ ನಾಟಕಕಾರರನ್ನಾಗಿಸಿದ ಸಾಧನೆಯೂ ಇವರದೇ. 'ಕೈಲಾಸಂ ಕಥನ', 'ಕೈಲಾಸಂ ಜೋಕುಗಳು', 'ತಿಳಿದವರಿಗೆ ತಾರೀFU', 'ಸತ್ತರೂ ಸಾಯದ ಕೈಲಾಸಂ' ಇವು ಕೆಲವು.

ಸಾಹಿತ್ಯ ರಚನೆ ರಾಜರತ್ನಂಅವರಲ್ಲಿ ಎಷ್ಟು ಶ್ರೀಮಂತವೋ ಸಾಹಿತ್ಯ ಪರಿಚಾರಿಕೆ ಅದಕ್ಕಿಂತಲೂ ಶ್ರೀಮಂತವಾದುದು. ಕರ್ನಾಟಕ ಸಂಘದ ಮೂಲಕ ಆರಂಭವಾದ ಈ ಕನ್ನಡ ಸೇವೆ ಅವರ ಅಂತ್ಯದವರೆಗೂ ಅವಿರತವಾಗಿ ಸಾಗಿ ಕನ್ನಡಕ್ಕೊಂದು ಘನತೆ ಗೌರವವನ್ನು ತಂದುಕೊಟ್ಟಿತು. ಸಂಘಗಳನ್ನು ಹೇಗೆ ನಡೆಸಬೇಕು. ಚಟುವಟಿಕೆಗಳನ್ನು ಹೇಗೆ ಸಂಘಟಿಸಬೇಕು, ಜನರಲ್ಲಿ ಸಾಹಿತ್ಯದ ಆಸಕ್ತಿಯನ್ನು ಹೇಗೆ ಬೆಳೆಸಬೇಕು ಎಂಬುದರ ಬಗ್ಗೆ ರಾಜರತ್ನಂ ಮಾದರಿಯಾಗಿದ್ದವರು. ಕನ್ನಡ ಪುಸ್ತಕಗಳನ್ನು ಮನೆಮನೆಗೆ ಹಂಚಿ – ಹೋದೆಡೆಯಲ್ಲೆಲ್ಲ ಹೊತ್ತೊಯ್ದು ಮಾರಿ, ಮನಒಲಿಸಿ ನೀಡಿ ಮನಮುಟ್ಟುವಂತೆ ಮಾತಾಡಿ ಜನರನ್ನು ಸಾಹಿತ್ಯದತ್ತ ಸೆಳೆಯುತ್ತಿದ್ದ ಅವರ ಪರಿ ಅಸಾಧಾರಣವಾದುದು. 'ನಾನು ಸಾಹಿತ್ಯ ಪರಿಚಾರಕ' ಎಂದು ಹೇಳಿಕೊಳ್ಳುವುದರಲ್ಲಿ ರಾಜರತ್ನಂ ಎಂದೂ ಹೆಮ್ಮೆ ಪಡುತ್ತಿದ್ದವರು, ಕೈಲಾಸಂ, ಸಂಸ, ರಾಶಿ, ವಿ.ಸೀ., ಕೆ.ವಿ. ಅಯ್ಯರ್, ಬಿ.ಜಿ.ಎಲ್. ಸ್ವಾಮಿ ಮುಂತಾದ ಶ್ರೇಷ್ಠ ಸಾಹಿತಿಗಳ ಸಾಹಿತ್ಯಕೃತಿಗಳನ್ನು ಪ್ರಸಾರಮಾಡಿ ಮಾಸ್ತಿ, ಬೇಂದ್ರೆ, ಡಿ.ವಿ.ಜಿ, ಕುವೆಂಪು, ಗೋವಿಂದ ಪೈ, ಬಿ.ಎಂ.ಶ್ರೀ, ಎ.ಆರ್.ಕೃ, ತಿ.ನಂ.ಶ್ರೀ., ಪಂಜೆ, ಮುಂತಾದ ಕನ್ನಡ ಸಾಹಿತ್ಯದ ಧುರೀಣರ ಸಾಧನೆಗಳನ್ನೆಲ್ಲ ಭಾಷಣಗಳಲ್ಲಿ ಹಾಡಿ ಹೊಗಳುತ್ತ ಸಂತೋಷವಾಗಿ ಪರಿಚಾರಿಕೆಯನ್ನು ಮಾಡಿದರು.

ಇದಕ್ಕೆ ಪೂರಕವಾಗಿ ಕನ್ನಡ ಸಾಹಿತ್ಯವನ್ನು ಅದರ ಸೊಗಸು ಸೌಂದರ್ಯವನ್ನು ಕವಿ–

ಕೃತಿಪರಿಚಯವನ್ನು ಅವರ ಕೊಡುಗೆಗಳನ್ನು ಸುಮಾರು ೨೦ ಕೃತಿಗಳಲ್ಲಿ ಹಿಡಿದಿಟ್ಟಿದ್ದಾರೆ. 'ಕರ್ಣನ ಕೀರ್ತಿಸ್ಥಂಭ', 'ಪಂಪಭಾರತ ಸಾರ', 'ನೀತಿ ರತ್ನಕಂಡ', 'ಬೊಪ್ಪಣಕವಿಯ ಶ್ರೀಗೊಮ್ಮಟಸ್ತುತಿ', 'ಸಂಚಿಯ ಹೊನ್ನಮ್ಮ', 'ಹೊಸಗನ್ನಡ ಯಶೋಧರ ಚರಿತೆ', 'ಚಿಕ್ಕದೇವರಾಜ ಬಿನ್ನಪ' ಮುಂತಾದ ಪ್ರಾಚೀನ ಸಾಹಿತ್ಯ ಕೃತಿಗಳನ್ನು 'ಆಶ್ಚರ್ಯ ಪರಂಪರೆ, 'ನಕ್ಕಳಾತಾಯಿ', ನಮ್ಮ 'ನಗೆಗಾರರು', 'ಕವಿ ಗೋವಿಂದ ಪೈ', 'ಸಂಸಕವಿ' ಮುಂತಾದ ಆಧುನಿಕ ಸಾಹಿತ್ಯ ಕೃತಿಗಳನ್ನು ರಚಿಸಿ ಸಾಹಿತ್ಯದ ರಸದೌತಣವನ್ನು ನೀಡಿದ್ದಾರೆ.

"ಕನ್ನಡ ನಾಡು-ನುಡಿಯ ಬಗೆಗಿದ್ದ ಅಪಾರವಾದ ಪ್ರೇಮ-ಅಭಿಮಾನ-ನಿಷ್ಠೆ ಪಶ್ನಾತೀತ. 'ಪರ್ಪಂಚ ಇರೋತನಕ ಕನ್ನಡ ಪದಗೊಳ್ ನುಗ್ಲಿ', 'ನರಕಕ್ಕಿಳಿಸಿ ನಾಲಿಗೆ ಸೀಳ್ಸಿ ಬಾಯ್ ಹೊಲ್ಸಾಕಿದ್ರೂನು ಮೂಗ್ನಲ್ ಕನ್ನಡ ಪದವಾಡ್ತೀನಿ' ಎಂಬ ಅಪಾರ ಕಾಳಜಿ, ಕನ್ನಡತನ ಎದ್ದು ಕಾಣುತ್ತದೆ, ಕನ್ನಡಿಗರನ್ನು ಸದಾ ಜಾಗೃತವಾಗಿಸುವ ಮಂತ್ರವಾಗಿದೆ. ಇಂತಹ ರಾಜರತ್ನಂ ಇದ್ದುದೇ ಕನ್ನಡಕ್ಕೊಂದು ಭಾಗ್ಯವೆನಿಸಿದೆ".

ಇದು ರಾಜರತ್ನಂ ಅವರ ಶತಮಾನೋತ್ಸವ ವರ್ಷ. ಸರ್ಕಾರ ಸಂಘ ಸಂಸ್ಥೆಗಳು ಸೂಕ್ತರೀತಿಯಲ್ಲಿ ಕಾರ್ಯಕ್ರಮಗಳನ್ನು ನಡೆಸಿವೆ, ನಡೆಸುತ್ತಿವೆ. ಸರ್ಕಾರ ರಾಜರತ್ನಂರ ಸಮಗ್ರ ಸಾಹಿತ್ಯವನ್ನು ಪ್ರಕಟಿಸುತ್ತಿದೆ. ಸಪ್ನ ಬುಕ್‌ಸ್ಟಾಲ್ ಕೂಡ ರಾಜರತ್ನಂರ ಎಲ್ಲ ಕೃತಿಗಳನ್ನು ಮುಖ್ಯವಾಗಿ ಮಕ್ಕಳ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದೆ. ಆದರೂ ರಾಜರತ್ನಂ ನೆನಪು ಆಗಬೇಕಾದ ಪ್ರಮಾಣದಲ್ಲಿ ಆಗಲಿಲ್ಲ. ಆ ಮೂಲಕ ಕನ್ನಡಿಗರಲ್ಲಿ ಆಗಬಹುದಾಗಿದ್ದ ನಾಡು-ನುಡಿ ಜಾಗೃತಿ ಮೂಡಿಸಬಹುದಾಗಿದ್ದ ಅವಕಾಶ ಸಫಲವಾಗಲಿಲ್ಲ ಎಂದು ವಿಷಾದದಿಂದಲೇ ಹೇಳಬೇಕಾಗಿದೆ.

❐

# ವಿಗ್ರಹಾರಾಧನೆಗೊಂದು ಮುನ್ನುಡಿ

• ಎಂ.ಎಸ್. ಪ್ರಭಾಕರ್

ಆಗಮಗಳಲ್ಲಿರುವ ಕ್ರಿಯಾ ಹಾಗೂ ಚರ್ಯಾಪಾದ ಭಾಗಗಳನ್ನು ಬಹುದೇವತೋಪಾಸನೆ ಮತ್ತು ವಿಗ್ರಹಾರಾಧನೆಗೆ ಸಂಬಂಧಿಸಿದ ಆಚಾರ ಸಂಹಿತೆ ಎಂದು ಪರಿಗಣಿಸಬಹುದು. ಈ ಆಚಾರ ಸಂಹಿತೆಯ ಮೂಲ ಬೇರುಗಳು ದ್ವೈತ ಹಾಗೂ ಅದ್ವೈತಗಳ ಅಪೂರ್ವ ಸಂಗಮ. ಇದರ ವಿಶ್ಲೇಷಣೆಯು ಸಾಂಖ್ಯ, ಯೋಗ ಧ್ಯಾನಾದಿಗಳೆಡೆಗೆ ಕೊಂಡೊಯ್ಯುತ್ತದೆ. ದೇವದೇವತೆಗಳ ಉಪಾಸನಾಕ್ರಮಗಳನ್ನು ತಿಳಿಯುವ ಮುನ್ನ ಇವುಗಳ ಉತ್ಪತ್ತಿ ಸ್ವರೂಪಾದಿಗಳನ್ನು ತಿಳಿಯಬೇಕು. ಇವುಗಳ ಸಂಕ್ಷಿಪ್ತ ವಿವರಣೆಯೇ ಈ ಪ್ರಬಂಧದ ಉದ್ದೇಶ.

ಇತಿಹಾಸ ಪೂರ್ವಕಾಲದ ಗುಹಾಲಯಗಳಲ್ಲಿ ಚಿತ್ರರೂಪದಲ್ಲಿ ಮೂಡಿರುವ ಮಾನವಾಕೃತಿಗಳನ್ನೊಳಗೊಂಡ ಕೆಲವು ಭಾವಾಭಿವ್ಯಕ್ತಿಗಳು, ಪ್ರಾಚೀನ ನಾಗರೀಕತೆಗಳ ಉತ್ಖನನಗಳಲ್ಲಿ ದೊರೆತ ಕೆಲವು ಸುಟ್ಟ ಮಣ್ಣಿನ ಮೂರ್ತಿಗಳು, ಇವನ್ನು ಹೊರತುಪಡಿಸಿದರೆ ಏಷ್ಯಾಮೈನರ್ ಶಾಸನದಲ್ಲಿ ಉಲ್ಲೇಖಗೊಂಡಿರುವ ಮಿತ್ರ, ವರುಣ, ಇಂದ್ರ, ನಾಸತ್ಯ ಮೊದಲಾದ ವೈದಿಕದೇವತೆಗಳು,[೧] ಇವೇ ದೇವದೇವತೆಗಳ ಬಗ್ಗೆ ದೊರೆತಿರುವ ಅತಿ ಪ್ರಾಚೀನ ಮಾಹಿತಿ ಎನ್ನಿಸಿವೆ. ಇವುಗಳೊಂದಿಗೆ ಋಗ್ವೇದದಲ್ಲಿರುವ ಬಹುದೇವತಾ ಪರವಾದ ವೈದಿಕ ಮಂತ್ರವನ್ನೂ ಉಲ್ಲೇಖಿಸಬಹುದು.

ಇಂದ್ರಂ ಮಿತ್ರಂ ಅಗ್ನಿಂ ಆಹುರಥೋ ದಿವ್ಯಃ ಸಸುಪರ್ಣೋ ಗರುತ್ಮಾನ್
ಏಕಂ ಸತ್ ವಿಪ್ರಾಃ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ[೨]

ಸತ್ ಎನ್ನುವುದು ಒಂದೇ ಬಹುರೂಪಿಯೂ ಹೌದು. ಇಂದ್ರ, ಮಿತ್ರ, ಅಗ್ನಿ ಮೊದಲಾದವರು ಇದರ ಅಂಶಸ್ವರೂಪಿಗಳು. ಸತ್ ಎನ್ನುವುದು ಏನು? ಇದು ಸತ್ಯಸ್ಯ ಸತ್ಯ. ರಸಾಯನ ಶಾಸ್ತ್ರದಲ್ಲಿ

ಅನಿಲಗಳ ಲಕ್ಷಣಗಳನ್ನು ಹೇಳುವಾಗ – It is colourless, oderless, tasteless ಎಂದು ಹೇಳುವ ಹಾಗೆ, ಸತ್ ಎನ್ನುವುದು ಶುದ್ಧ, ಅತಿಶುದ್ಧ ಹಾಗೂ ಅಂತಿಮ ಸ್ವರೂಪ. ಸತ್ ಎನ್ನುವುದರ ವಿವರಣೆಯೊಂದಿಗೆ, ಈ ವೈಚಾರಿಕ ವಿಶ್ಲೇಷಣೆ ಆರಂಭಗೊಳ್ಳುತ್ತದೆ. ದೇವರು ಮತ್ತು ದೈವತ್ವದ ವಿಚಾರಗಳು, ಚಿಂತನೆಗಳು, ಕಾಲಕಾಲಕ್ಕೆ ಬದಲಾಗಿವೆ ಎಂದು ಗಮನಿಸಬಹುದು.

ಯಜ್ಞಯಾಗಾದಿಗಳ ಕಾಲದಲ್ಲಿ ಜನರು ಪ್ರಾಕೃತಿಕ ಶಕ್ತಿಗಳನ್ನು ಆರಾಧಿಸುತ್ತಿದ್ದರು. ಇದು ವೇದಗಳ ಕಾಲದ ಆರಂಭದ ವ್ಯವಸ್ಥೆಯಾಗಿತ್ತು. ಮೇಲ್ಕಾಣಿಸಿದ ಋಗ್ವೇದ ಮಂತ್ರವೂ ವೇದಗಳ ಆರಂಭಕಾಲವನ್ನು ಸೂಚಿಸುವಂಥದ್ದು. ಅಂದು ಯಜ್ಞಯಾಗಾದಿಗಳ ಆಚರಣೆ ಕರ್ತವ್ಯವೆನಿಸಿತ್ತು. ಅದು ಸೃಷ್ಟಿಚಕ್ರದ ಭಾಗವೆನಿಸಿತ್ತು.

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವ:
ಕರ್ಮ ಬಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ
ತಸ್ಮಾದ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ[೩]

ಮಳೆಬೆಳೆಗಳು ಪ್ರಾಕೃತಿಕ ಸಂಪತ್ತು. ಈ ಪ್ರಾಕೃತಿಕ ಸಂಪತ್ತನ್ನು, ಯಜ್ಞಗಳ ಆಚರಣೆ ದೇವತೆಗಳ ಆರಾಧನೆಯ ಮೂಲಕ ಪಡೆಯುತ್ತಿದ್ದರು. ಯಜ್ಞಗಳಿಂದ ಮಳೆ, ಮಳೆಯಿಂದ ಬೆಳೆ, ಬೆಳೆಯಿಂದ ಜೀವ ಸೃಷ್ಟಿ – ಇದು ಸೃಷ್ಟಿಯ ಜೀವ ಚಕ್ರವೆನಿಸಿತ್ತು. ಯಜ್ಞಗಳ ಆಚರಣೆ ಕರ್ಮದ ಭಾಗವೆನಿಸಿತ್ತು. ಯಜ್ಞಗಳ ಆಚರಣೆಯಲ್ಲಿ ವೈಯಕ್ತಿಕ ಪ್ರಲೋಭನೆ ಇರಲಿಲ್ಲ. ವೇದ ಕಾಲದ ಆಚರಣೆ, ನಂಬಿಕೆಗಳನ್ನು ಮತ್ತೊಂದು ಶ್ಲೋಕವು ಸವಿವರವಾಗಿ ಬಣ್ಣಿಸಿದೆ.

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ
ಯಜ್ಞೇರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ
ತೇ ಪುಣ್ಯಮಾಸಾದ್ಯ ಸುರೇಂದ್ರ ಲೋಕಮಶ್ನಂತಿ
ದಿವ್ಯಾನ್ ದಿವಿ ದೇವಭೋಗಾನ್[೪]

ಯಜ್ಞಗಳ ಆಚರಣೆಯ ಪುಣ್ಯಫಲದಿಂದ ಇಂದ್ರ ಲೋಕವನ್ನು ಪಡೆದು, ದೇವದೇವತೆಗಳಿಗೆ ಸಮಾನವಾದ ಸುಖವನ್ನು ಅನುಭವಿಸುವ ಬಯಕೆಯಿಂದ ಯಜ್ಞ ಕರ್ಮಾದಿಗಳನ್ನು ಆಚರಿಸುತ್ತಿದ್ದರು. ಸೋಮಪಾನಿಗಳಾದ ವೇದಕಾಲದ ಪುರುಷರು ಸ್ವರ್ಗಾಕಾಂಕ್ಷಿಗಳು.

ಮೇಲ್ಕಂಡ ಭಗವದ್ಗೀತೆಯ ಶ್ಲೋಕಗಳು ವೈದಿಕಯುಗದ ಜನರು ನಂಬಿದ ವ್ಯವಸ್ಥೆ, ನಡೆವಳಿಕೆ, ಧ್ಯೇಯಗಳ, ಸ್ಪಷ್ಟಚಿತ್ರಣವನ್ನು ಕಟ್ಟಿಕೊಡುತ್ತದೆ. ವೈದಿಕಯುಗದಲ್ಲಿ ಕರ್ಮವು ಬ್ರಹ್ಮಸೃಷ್ಟಿಯೆನಿಸಿತ್ತು. ಬ್ರಹ್ಮವು ನಾಶವಿಲ್ಲದ್ದು ಹಾಗೂ ನಿತ್ಯ ಎನಿಸಿದ್ದು, ಸತ್ ಎನ್ನುವುದರ ಸ್ವರೂಪವೆನಿಸಿದೆ. ಉಪನಿಷತ್ತುಗಳಲ್ಲಿ ಇದು ಆತ್ಮ ಸ್ವರೂಪಿ, ಜ್ಯೋತಿಸ್ವರೂಪಿ ಹಾಗೂ ಪುರುಷ ಸ್ವರೂಪಿಯಾಗಿ ವಿವರಿಸಲ್ಪಟ್ಟಿದೆ.

ಸತ್ ಎನ್ನುವುದರ ಮೂಲ ಮಾಹಿತಿ, ಋಗ್ವೇದದ ಹತ್ತನೆಯ ಮಂಡಲವಲ್ಲಿದೆ.

ಉಪನಿಷತ್ತುಗಳೂ ಈ ವಿಷಯವನ್ನು ಸಾಕಷ್ಟು ವಿಸ್ತರಿಸಿವೆ. ಸೃಷ್ಟಿಯ ಹಂತಗಳನ್ನು ತೆರೆದಿಡುವ ಮುನ್ನ ಈ ಸೂಕ್ತದ ಆರಂಭದಲ್ಲಿ ದೇವತೆಗಳ ಉತ್ಪತ್ತಿಕ್ರಮವನ್ನು ತಿಳಿಯುವ ಸಲುವಾಗಿ, ಎಂದು ಆರಂಭಗೊಂಡಿದೆ.

> ದೇವಾನಾಂ ಪೂರ್ವೇ ಯುಗೇಽಸತಃ ಸದಜಾಯತ
> ದೇವಾನಾಂ ಯುಗೇ ಪ್ರಥಮೇಽಸತಃ ಸದಜಾಯತ
> ತದಾಶಾ ಅನ್ವಜಾಯತ ತದುತ್ತಾನಪದಸ್ಪರಿ
> ಭೂರ್ಜಜ್ಞಾ ಉತ್ತಾನಪದೋ ಭುವ ಆಶಾ ಅಜಾಯತ [೫]

ದೇವತೆಗಳಿಗಿಂತ ಪೂರ್ವದಲ್ಲಿ ಅಸತ್ತಿನಿಂದ ಸತ್ ಹುಟ್ಟಿತು. ಅದರಿಂದ ದಿಕ್ಕುಗಳೂ, ಅದರಿಂದ ಉತ್ತಾನಪದವೂ ಹುಟ್ಟಿತು. ಉತ್ತಾನಪದದಿಂದ ಭೂಮಿ ಉದಯಿಸಿತು. ದಿಕ್ಕುಗಳಿಂದ ಸ್ವರ್ಗವು ಉದಯಿಸಿತು.

ಸೃಷ್ಟಿಯ ಆರಂಭದಲ್ಲಿ ಅಸತ್ತಿನಿಂದ ಸತ್ ಹುಟ್ಟಿದ್ದು ಖಚಿತವೆನಿಸಿದೆ. ಇದನ್ನು ಉಪನಿಷತ್ತುಗಳೂ ವಿವರಿಸಿವೆ. ಉತ್ತಾನಪದ ಎನ್ನುವಲ್ಲಿ ಸ್ಪಷ್ಟತೆ ಇಲ್ಲ. ಸಾಯಣರು ತಮ್ಮ ಭಾಷ್ಯದಲ್ಲಿ ಉತ್ತಾನಪದವನ್ನು ವೃಕ್ಷ ಎಂದು ಗುರುತಿಸುತ್ತಾರೆ. ಉತ್ತಾನಂ ಊರ್ಧ್ವತಾನಂ ಪದ್ಯಂತ ಇತ್ಯುತ್ತಾನಪದೋ ವೃಕ್ಷಾಃ [೬] – ಇದು ಸಾಯಣರ ವಿವರಣೆ. ದೇವತೆಗಳಿಗಿಂತ ಮೊದಲಿಗೆ ಹುಟ್ಟಿದ್ದು ಔಷಧಿ ಸಸ್ಯಗಳು, ಸಸ್ಯಸಂಪತ್ತು ಎಂದು ವಿವರಿಸಲಾಗಿದೆ.

> ಔಷಧೀಃ ಪೂರ್ವಜಾತಾ ದೇವೇಭ್ಯಃ ತ್ರಿಯುಗಃ ಪುರಾ [೭]

ಉತ್ತಾನಪದವು ದೇವಮಾತೆಯಾದ ಅದಿತಿಗೆ ವಿಶೇಷಣವೆಂದೂ, ಮೂಲಪ್ರಕೃತಿಯ ಸಂಕೇತವೆಂದೂ ಪಾಶ್ಚಾತ್ಯವಿದ್ವಾಂಸರ ಅಭಿಮತ. ಆದರೂ ಉತ್ತಾನಪದದ ಅರ್ಥ ವಿವರಗಳು ಅಸ್ಪಷ್ಟ.

ಅದಿತಿಯಿಂದ ದಕ್ಷನೂ, ದಕ್ಷನಿಂದ ಅದಿತಿಯೂ ಹುಟ್ಟಿದ್ದನ್ನು ಪುನಃ ವಿವರಿಸಿದೆ.

> ಅದಿತಿರ್ದಕ್ಷೋ ಅಜಾಯತ ದಕ್ಷಾದತಿಃ ಪರಿ
> ತಾಂ ದೇವಾ ಅನ್ವಜಾಯಂತ ಭದ್ರಾ ಅಮೃತಬಂಧವಃ

ಇದು ಸೃಷ್ಟಿಯ ಚಕ್ರ, ಇವರೀರ್ವರೂ ಗಂಡು–ಹೆಣ್ಣಿನ ಸಂಕೇತ. ಇದು ಸೃಷ್ಟಿ ಮತ್ತು ಪ್ರತಿಸೃಷ್ಟಿಗಳ ಪುನರಾವರ್ತನೆಯ ಪರಿ ಎಂದು ವಿದ್ವಾಂಸರು ಗುರುತಿಸುತ್ತಾರೆ.

ಮೇಲ್ಕಂಡ ವಿವರಗಳು ಅಸತ್‌ನಿಂದ ಆರಂಭಗೊಂಡು, ದೇವತೆಗಳ ಸೃಷ್ಟಿಯ ಪ್ರಸ್ತಾಪದೊಂದಿಗೆ ಕೊನೆಗೊಂಡಿದೆ. ಇವುಗಳ ಮಧ್ಯೆ, ಸತ್, ದಿಕ್ಕುಗಳು, ವೃಕ್ಷ ಸಂಪತ್ತು(ಉತ್ತಾನಪದ), ಭೂಮಿ, ಸ್ವರ್ಗ, ಗಂಡುಹೆಣ್ಣುಗಳ ಹುಟ್ಟು ಹುದುಗಿದೆ. ಋಗ್ವೇದದಲ್ಲಿ ಬೆಳೆದಿರುವ ಅದಿತಿಯ ವ್ಯಕ್ತಿತ್ವ ವಿಸ್ತೃತವಾದದ್ದು.

> ಅದಿತಿಃ ದ್ಯೌಃ ಅದಿತಿಃ ಆಂತರಿಕ್ಷಂ ಅದಿತಿಃ ಮಾತಾ ಪಿತಾಸಪುತ್ರಃ
> ವಿಶ್ವೇದೇವಾಃ ಅದಿತಿಃ ಪಂಚ ಜನಾಃ ಅದಿತಿಃ ಜಾತಃ ಅದಿತಿಃ ಜನಿತ್ವಂ [೮]

ನಿರುಕ್ತವು ಅದಿತಿಯನ್ನು ಪವಿತ್ರಳಾದ ದೇವಮಾತೆಯೆಂದು ಬಣ್ಣಿಸಿದೆ. ಆದಿತಿಯ

ವಿವರಗಳು ಮೂಲಪ್ರಕೃತಿ ಅಥವಾ ಆದಿಶಕ್ತಿಗೆ ಸಂಬಂಧಿಸಿದ್ದು, ಜಾನಪದೀಯ ಎಳೆಗಳನ್ನು ಬಿಡಿಸಲು ಸಾಧ್ಯವಿದೆ.

ವೇದೋತ್ತರಯುಗದಲ್ಲಿ ಆತ್ಮವನ್ನು ಬ್ರಹ್ಮದೊಂದಿಗೆ ಸಮೀಕರಿಸಿದ್ದನ್ನು ಕಾಣಬಹುದು. ಅಥರ್ವವೇದದ ವಾಕ್ಯ 'ಅಯಂ ಆತ್ಮಾ ಬ್ರಹ್ಮ' ಎನ್ನುವುದು ಮಾಂಡೂಕ್ಯೋಪನಿಷತ್ತಿನಲ್ಲಿ 'ಸರ್ವಂ ಏತದ್ ಬ್ರಹ್ಮ ಅಯಮಾತ್ಮಾ ಬ್ರಹ್ಮ' ಎಂದು ಪುನರುಕ್ತಿಯಾಗಿದೆ. ಉಪನಿಷತ್ತುಗಳಲ್ಲಿಯೂ ಸೃಷ್ಟಿಯ ಆರಂಭ ಅಸತ್‌ನಿಂದ ಎಂದು ಗಮನಿಸಬಹುದು. ಆತ್ಮವು ಸತ್ಯದ ತುಣುಕಾಗಿ ಗ್ರಹಿಸಲ್ಪಟ್ಟಿದೆ.

ಅಸದ್ವಾ ಇದಮಗ್ರ ಆಸೀತ್
ತತೋ ವೈ ಸದಜಾಯತ
ತದಾತ್ಮಾನಗ್ಂ ಸ್ವಯಮಕುರುತ [೯]

ಅಸತ್ತು ಎನ್ನುವುದು ಮೊದಲೇ ಇತ್ತು. ನಂತರ ಸತ್ ಹುಟ್ಟಿತು. ಅದು ತನ್ನನ್ನು ತಾನೇ ಸೃಷ್ಟಿಸಿಕೊಂಡಿತು. ಇದು ತೈತ್ತರೀಯ ಉಪನಿಷತ್ತಿನ ವಿವರಣೆ.

ಆತ್ಮಾ ವಾ ಇದಮೇಕ ಏವಾಗ್ರ ಆಸೀತ್
ನಾನ್ಯತ್ ಕಿಂಚನ ಮಿಷತ್
ಸ ಈಕ್ಷತ ಲೋಕಾನ್ನು ಸೃಜಾ ಇತಿ [೧೦]

ಐತರೇಯ ಉಪನಿಷತ್ತು ಆತ್ಮದ ಉಲ್ಲೇಖದೊಂದಿಗೆ ಆರಂಭಿಸಲ್ಪಟ್ಟಿದೆ. ಆತ್ಮವು ಈ ಲೋಕವನ್ನು ಸೃಷ್ಟಿಸಿದ್ದನ್ನು ಸ್ಮರಿಸುತ್ತದೆ. ಆತ್ಮವು ಪುರುಷರೂಪಿಯಾದುದ್ದನ್ನು ಗಮನಿಸೋಣ

ಆತ್ಮೈವೇದಂ ಅಗ್ರ ಆಸೀತ್ ಪುರುಷವಿಧಃ [೧೧]

—ಇದು ಬೃಹದಾರಣ್ಯಕ ಉಪನಿಷತ್ತಿನ ವ್ಯಾಖ್ಯೆ. ಆತ್ಮವು ಮೊದಲಿಗೆ ಪುರುಷರೂಪಿಯಾಗಿತ್ತು.

ಅಂಗುಷ್ಠ ಮಾತ್ರಃ ಪುರುಷೋಂತರಾತ್ಮಾ
ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ [೧೨]

ಇದು ಶ್ವೇತಾಶ್ವತರ ಉಪನಿಷತ್ತಿನ ವಿವರಣೆ. ಯಾವಾಗಲೂ ಜನರ ಹೃದಯದಲ್ಲಿ ಪ್ರತಿಷ್ಠಿತನಾದ ಅಂಗುಷ್ಠಗಾತ್ರದ ಪುರುಷನು ಆತ್ಮನೇ ಆಗಿದ್ದಾನೆ. ಈ ಉಪನಿಷತ್ತುಗಳ ಅರ್ಥವನ್ನು ತಿಳಿಯುವ ಮುನ್ನ ಪುರುಷ ಪದದ ವಿವಿಧ ಅರ್ಥ ಭಾವಗಳನ್ನು ತಿಳಿಯಬೇಕು.

"ಪೂರ್ವಂ ಏವ ಅಹಂ ಇಹ ಆಸನ್ ಇತಿ"; ಇದು ಪುರುಷ ಪದದ ಅರ್ಥವ್ಯಾಪ್ತಿಯ ಒಂದು ಮಜಲು. ಹಿಂದೆಯೂ ಇದ್ದವನು. ಇದು ತೈತ್ತರೀಯ ಆರಣ್ಯಕದ ವ್ಯಾಖ್ಯೆ.

"ಸರ್ವಾಸು ಪೂರ್ಷುಪುರಿಶಯಃ ಪುರುಷಃ"; [೧೩]

ಎಲ್ಲರ ಶರೀರದಲ್ಲಿ ವಾಸಿಸಿರುವವನು ಪುರುಷ. ಇದು ಬೃಹದಾರಣ್ಯಕ ಉಪನಿಷತ್ತಿನ ವಿವರಣೆ. ಶತಪಥ ಬ್ರಾಹ್ಮಣದಲ್ಲಿ ಹೆಚ್ಚಿನ ವಿವರಗಳಿವೆ.

ಇಮೇವ್ಯೆಲೋಕಾಃ ಪೂರಯಮೇವ ಪುರುಷೋ ಯೋऽಯಂ,
ಪವತೋ ಸೋऽಸ್ಯಾಂ ಪುರಿಶೇತೇ ತಸ್ಮಾತ್ಪುರುಷಃ [೧೪]

ಎಲ್ಲಾ ಕಡೆಯೂ ಚೈತನ್ಯ ತುಂಬುವವನು ಪುರುಷ. ಇದು ಇನ್ನೊಂದು ಮಜಲು. ಪುರುಷ ಪದದ ವಿವಿಧ ವ್ಯಾಖ್ಯೆಗೆ ಭಗವದ್ಗೀತೆಯ ಶ್ಲೋಕಗಳನ್ನೂ ಗಮನಿಸಬೇಕು. ಪುರುಷನ ವಿವಿಧ ರೂಪಗಳ ಚಿತ್ರಣವನ್ನು ಸಮರ್ಥವಾಗಿ ಇಲ್ಲಿ ಕಾಣಬಹುದು.

ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋऽಕ್ಷರ ಉಚ್ಯತೇ
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ
ಯೋ ಲೋ ಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ [೧೫]

ಗೀತೆಯ ಪ್ರಕಾರ ಪುರುಷನಿಗೆ ಕ್ಷರ, ಅಕ್ಷರ ಮತ್ತು ಉತ್ತಮ ಎಂದು ಮೂರು ರೂಪಗಳು. ಕ್ಷರವು ಶರೀರಸ್ವರೂಪಿ, ಅಕ್ಷರವು ಆತ್ಮಸ್ವರೂಪಿ. ಉತ್ತಮಪುರುಷನೇ ಪುರುಷೋತ್ತಮ ಅಥವಾ ಈಶ್ವರ. ಮೂರುಲೋಕಗಳ ಪಾಲನೆ ಮತ್ತು ಪೋಷಣೆ ಹಾಗೂ ರಕ್ಷಣೆಗಳು ಅವನದ್ದು. "ಪುರುಷಃ ಪಾಲನಪೂರಣಾಯ" ಎಂಬ ಉತ್ಪತ್ತಿಯೂ ಇದೆ. ಈ ವಿವರಣೆಗಳಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ಉಪನಿಷತ್ತುಗಳ ನಂತರ ಭಗವದ್ಗೀತೆಯ ಪುರುಷನ ವಿವರಣೆಗಳು ಮೇಲ್ಗೈ ಪಡೆದಿವೆ. ಇದು ದರ್ಶನಗಳ ಯುಗಕ್ಕೆ ನಾಂದಿ ಹಾಡಿದೆ. ಪುರುಷನ ಮೂರು ಮುಖಗಳು ವಿಸ್ತೃತಗೊಂಡು ನಿರೀಶ್ವರ ಸಾಂಖ್ಯ ಹಾಗೂ ಸೇಶ್ವರ ಸಾಂಖ್ಯಕ್ಕೆ ಗ್ರಾಸವಾಯಿತು ಎನ್ನಬಹುದು. ಕೆಳಗಿನ ತಃಖ್ತೆಯಲ್ಲಿ ನಿರೀಶ್ವರ ಹಾಗೂ ಸೇಶ್ವರ ಸಾಂಖ್ಯದ ಚಿತ್ರಣವಿದೆ.



ಅಕ್ಷರ ಸ್ವರೂಪನೇ ಆತ್ಮಸ್ವರೂಪಿ. ಇವನೇ ಅಣುವಿನಲ್ಲಿ ಅಣುವಾಗಿ ಮಹತ್ತಿನಲ್ಲಿ ಮಹತ್ತಾಗಿ ಎಲ್ಲಾ ಕ್ಷರ (ನಶ್ವರ) ದೇಹಗಳಲ್ಲಿ ವ್ಯಾಪಿಸಿದ್ದಾನೆ.

ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ [೧೬]

ಆತ್ಮಸ್ವರೂಪಿಯಾದ ಇವನು ಒಬ್ಬನೇ. ಎಲ್ಲಾ ಪ್ರಾಣಿಗಳ ಅಂತರ್ಯದಲ್ಲಿ ವಾಸಿಸುತ್ತ ಹಲವು ರೂಪಗಳಲ್ಲಿ ಪ್ರಕಟಗೊಳ್ಳುತ್ತಾನೆ.

ಪುರಂ ಏಕಾದಶದ್ವಾರಂ ಅಜಸ್ಯ ಅವಕ್ರ ಚೇತಸಃ [೧೭]

ಅವಿನಾಶಿಯಾದ ಚೇತನವುಳ್ಳ ಆತ್ಮವು ಏಕಾದಶದ್ವಾರಗಳಿಂದ ಕೂಡಿದ ಈ ಶರೀರದಲ್ಲಿದೆ.

ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಂ ಅವ್ಯಯಂ [೧೮]

ಈ ಪುರುಷರೂಪಿ ಆತ್ಮವನ್ನು ಮೂರು ಗುಣಗಳಾದ ಸತ್ವ, ರಜಸ್ಸು, ತಮಸ್ಸುಗಳು ಬಂಧಿಸಿವೆ. ಈ ಮೂರು ಗುಣಗಳಿಂದ ಬೇರೆಯಾದದ್ದು ಯಾವುದೂ ಇಲ್ಲ ಎಂದು ಗೀತೆಯು ವಿವರಿಸಿದೆ.

ನ ತದಸ್ತಿ ತೃಥಿವ್ಯಾ ವಾ ದಿವಿ ದೇವೇಷು ವಾ ಪುನಃ
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ರಿಭಿರ್ಗುಣೈಃ [೧೯]

ಪ್ರಕೃತಿಯ ಮೂರು ಗುಣಗಳಿಂದ ಬಿಡುಗಡೆ ಹೊಂದಿ ಪ್ರತ್ಯೇಕವಾಗಿ ನಿಲ್ಲುವ ಅರಿವೇ ನಿರೀಶ್ವರಸಾಂಖ್ಯ ಪ್ರತಿಪಾದಿಸಿರುವ ಮುಮುಕ್ಷತ್ವ. ಪುರುಷ ಮತ್ತು ಪ್ರಕೃತಿಯ ಪ್ರತ್ಯೇಕತೆಯನ್ನು ಗುರುತಿಸುವುದರಿಂದ ನಿರೀಶ್ವರಸಾಂಖ್ಯವನ್ನು ದ್ವೈತಸಿದ್ಧಾಂತ ಎಂದು ತಿಳಿಯಲಾಗಿದೆ. ಪುರುಷ ಮತ್ತು ಪ್ರಕೃತಿ ಎರಡೂ ಸ್ವಂತತ್ರ ತತ್ವಗಳು. ನಿರೀಶ್ವರ ಸಾಂಖ್ಯದ ಹೆಚ್ಚಿನ ವಿವರಗಳನ್ನು ಸಾಂಖ್ಯಕಾರಿಕೆಯಲ್ಲಿಯೂ ಗಮನಿಸಬಹುದು. ಪ್ರಕೃತಿಯು ಮೂಲಪ್ರಪಂಚದ ಮೂಲಕಾರಣ ವೆನಿಸಿದ್ದು, ಮೂಲಪ್ರಕೃತಿಯು ಪ್ರಧಾನವೆಂದೂ ಗುರುತಿಸಲ್ಪಡುತ್ತದೆ. ಪ್ರಕೃತಿಯ ಸಂಕೀರ್ಣತೆಗೆ ಕಾರಣ ಮೂರು ಗುಣಗಳು. ಈ ಮೂರು ಗುಣಗಳು ವಿಭಿನ್ನವಾದರೂ ಅನ್ಯೋನ್ಯ ಆಶ್ರಯ, ಸಂಬಂಧಗಳನ್ನು ಹೊಂದಿದ್ದು ಪ್ರತ್ಯೇಕಗೊಳಿಸಲಾಗದು. ಸತ್ವ, ರಜಸ್ಸು, ತಮಸ್ಸುಗಳೆಂಬ ಈ ಮೂರು ಗುಣಗಳು ಭೌತಿಕ ವಿಶಿಷ್ಟಾಂಶಗಳನ್ನು ಸೂಚಿಸುತ್ತವೆ.

ಸತ್ವಂ ಲಘು ಪ್ರಕಾಶಕಂ ಇಷ್ಟಂ ಉಪಷ್ಟಃ ಭಕಂ ಚಲಂ ಚ ರಜಃ
ಗುರುವರಣಕಂ ಏವಂ ತಮಃ ಪ್ರದೀಪವತ್ ಚ ಅರ್ಥತೋ ವೃತ್ತಿಃ [೨೦]

ಸತ್ವ ಎನ್ನುವುದು ಕ್ರಿಯಾಶೀಲವಾದದ್ದು ಮತ್ತು ಪ್ರಕಾಶಾತ್ಮಕವಾದದ್ದು. ರಜಸ್ಸು ಪ್ರಚೋದಾತ್ಮಕ ಹಾಗೂ ಚಲನಶೀಲವೆನಿಸಿದೆ. ತಮಸ್ಸು ಮಾಂದ್ಯ ಹಾಗೂ ಜಡತ್ವವನ್ನು ಸೂಚಿಸುತ್ತದೆ. ಇವು ವಿರೋಧ ಸ್ವಭಾವಗಳಾದರೂ ಪರಸ್ಪರ ಅನ್ಯೋನ್ಯ ಕ್ರಿಯೆಗೆ ಅಡಚಣೆ ಯಾಗಿಲ್ಲ.

ಅನ್ಯೋನ್ಯ ಅಭಿಭಾವ ಆಶ್ರಯ ಜನನ ಮಿಥುನ ವೃತ್ತಯಶ್ಚಗುಣಾಃ [೨೧]

ಈ ಪ್ರಕೃತಿತತ್ವವು ಸರ್ವವ್ಯಾಪಿ; ರೂಪಾಂತರಗಳನ್ನೂ ಪಡೆಯುತ್ತದೆ. ಅವುಗಳ ಸೂಕ್ಷ್ಮರಚನೆ ಆತ್ಮಪ್ರಕಾಶಕ್ಕೆ ಹೊಂದಿಕೊಂಡಿದೆ. ಪ್ರಕೃತಿತತ್ವದ ಅರಿವು ಉಂಟುಮಾಡುವ ಅಂಶವೇ ಪುರುಷತತ್ವ ಪುರುಷತತ್ವವು ಪ್ರಕೃತಿಯಂತೆ ಸಂಕೀರ್ಣವಲ್ಲ; ಸರಳವಾದದ್ದು, ಚಲನಾತ್ಮಕವಲ್ಲ; ಅಚಲವಾದದ್ದು. ಪ್ರಕೃತಿ ಸಕ್ರಿಯವೆನಿಸಿದರೆ ಪುರುಷ ನಿಷ್ಕ್ರಿಯ. ಕೇವಲ ಸಾಕ್ಷಿ, ನೋಡಬಲ್ಲದು. ಪುರುಷತತ್ವವೂ ಪ್ರಕೃತಿ ಇಲ್ಲದೆ ನಿಷ್ಕ್ರಿಯವೆನಿಸಿದೆ. ಪುರುಷನು ಭೋಕ್ತೃ. ಪುರುಷನಿಲ್ಲದೆ ಪ್ರಕೃತಿಯು ಪ್ರಕಾಶಗೊಳ್ಳದು. ಇವೆರೆಡರ ಸಹಯೋಗ ಒಂದಕ್ಕೊಂದು ಪೂರಕವಾದದ್ದು. ಪ್ರಕೃತಿಯೊಂದಿಗೆ ಮುಳುಗಿ, ಬಿಡುಗಡೆ ಹೊಂದಿ ಪ್ರತ್ಯೇಕವಾಗಿ ನಿಲ್ಲುವ ಪುರುಷಸ್ಥಿತಿಯೇ ಕೈವಲ್ಯ. ಈ ಪ್ರಾಪಂಚಿಕ ನಂಟು ಕುಂಟ ಮತ್ತು ಕುರುಡರ ನಡುವೆ ಇರುವ ಪರಸ್ಪರ ಪರಾವಲಂಬನೆಯಂತೆ ಬೆಸೆಯಲ್ಪಟ್ಟಿದೆ.[೨೨] ಕೈವಲ್ಯಸ್ಥಿತಿಯ ಅರಿವಾದಾಗ ಮೊದಲಿನ ನಂಟು ಚಕಿತಗೊಳಿಸುವಂಥದ್ದು. ಇದು ನಿರೀಶ್ವರ ಸಾಂಖ್ಯದ ತಾತ್ವಿಕ ಸ್ವರೂಪ. ಈ ತಾತ್ವಿಕ ಚಿಂತನೆಯಲ್ಲಿ ಈಶ್ವರನಿಗೆ ಅಥವಾ ಪರಮಾತ್ಮನಿಗೆ ಸ್ಥಾನವಿಲ್ಲ. ಪುರುಷನು ಪ್ರಕೃತಿಯ ಸಹವಾಸದಿಂದಾಗಿ ವಿವಿಧ ಲಕ್ಷಣಗಳೊಂದಿಗೆ ಹಲವಾರು ರೂಪಗಳಲ್ಲಿ ಪ್ರಕಟಗೊಳ್ಳುತ್ತಾನೆ.

ಪುರುಷ ಬಹುತ್ವಂ ಸಿದ್ಧಂ ತ್ರೈಗುಣ್ಯ ವಿಪರ್ಯಯಾತ್ ಚೈವ [೨೩]

ಸೇಶ್ವರ ಸಾಂಖ್ಯದಲ್ಲಿ ಈಶ್ವರ ಪ್ರಣಿಧಾನತ್ವವಿದೆ. ತಾತ್ವಿಕ ಚಿಂತನೆಗಿಂತ ಸಾಧನೆಗೆ ಹೆಚ್ಚು ಒತ್ತು ಲಭಿಸಿದೆ. ನಿರೀಶ್ವರಸಾಂಖ್ಯದಲ್ಲಿ ಪುರುಷ ಪ್ರಕೃತಿಗಳ ಸಂಬಂಧ, ಪ್ರಕೃತಿಯಿಂದ ಬಿಡುಗಡೆ ಹೊಂದಿ ಪ್ರತ್ಯೇಕಗೊಳ್ಳುವ ಪುರುಷನ ಚಿಂತನೆ ನಡೆದರೆ, ಸೇಶ್ವರ ಸಾಂಖ್ಯದಲ್ಲಿ ಜೀವಾತ್ಮ ಮತ್ತು ಪರಮಾತ್ಮ ಇವುಗಳ ಸಂಬಂಧ ಹಾಗೂ ಐಕ್ಯತೆಯ ಚಿಂತನೆಯಿದೆ.

ಪ್ರಕೃತಿಯ ಗುಣಗಳಿಂದ ಆವೃತವಾದ ಈ ಶರೀರದಲ್ಲಿ ಆತ್ಮದ ತುಣುಕೊಂದು ಮನೆಮಾಡಿದೆ ಎನ್ನುವ ಭಾವ, ಶರೀರದ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವ ಅಗತ್ಯತೆ ಎಡೆಗೆ ಬೆಟ್ಟುಮಾಡಿ ತೋರಿಸುತ್ತದೆ ಹಾಗೂ ಜಾಗೃತಿ ಮೂಡಿಸುತ್ತದೆ.ಇದು ಯೋಗದ ಮೊದಲ ಅಂಗಗಳಾದ ಯಮ ನಿಯಮಗಳಿಗೆ ಸೋಪಾನ. ನಂತರ ದೈಹಿಕ ಸಾಧನೆಯ ಹಂತಗಳಾದ ಆಸನ, ಪ್ರಾಣಾಯಾಮಗಳು. ದೇಹದೊಳಗಿರುವ ಚೈತನ್ಯವನ್ನು ಉದ್ದೀಪನ ಗೊಳಿಸುವುದೇ ಇವುಗಳ ಉದ್ದೇಶ. ಉದ್ದೀಪನಗೊಂಡ ಚೈತನ್ಯವನ್ನು, ಹಿಡಿದು ನಿಲ್ಲಿಸುವುದೇ ಧ್ಯಾನ ಧಾರಣಾದಿಗಳು. 'ಧ್ಯಾನಂ ನಿರ್ವಿಷಯ ಮನಃ' – ಎಂಬ ಮಾತಿದೆ. ಆದರೆ ಅದು ಅಷ್ಟು ಸುಲಭದ ಹಾದಿಯಲ್ಲ. ಈಶ್ವರ ಪ್ರಣಿಧಾನತ್ವ ಕೆಲವು ಸರಳ ದಾರಿಗಳನ್ನು ತೋರಿಸುತ್ತದೆ. ಪ್ರತಿಮೆಯು ಪ್ರತೀಕವಾಗುತ್ತದೆ. ಆಲಂಬಸ್ಯ ಪ್ರಾಧಾನ್ಯೇನ ಧ್ಯಾನಂ ಪ್ರತೀಕೋಪಾಸ್ತಿಃ' – ಧ್ಯಾನಕ್ಕೊಂದು ಅವಲಂಬನೆ ಬೇಕು. ಪ್ರತಿಮೆಯೇ ನೆರವಾಗುತ್ತದೆ. ಈಶ್ವರನಿಗೊಂದು ಸ್ವರೂಪ ನೀಡಿದ್ದು ಅದು ಪುರುಷ ರೂಪವನ್ನು ಧರಿಸುತ್ತದೆ. ಆದ್ದರಿಂದ ದೇವರು ಪುರುಷವಾಚಿ. ಅವನಿಗೆ ನಾಲ್ಕುಕೈಗಳು. ಶಂಖ, ಚಕ್ರ ಗದಾ ಪದ್ಮಗಳನ್ನು ಹಿಡಿದಿದ್ದಾನೆ.

'ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ [೨೪]

– ಇದು ಬೃಹದಾರಣ್ಯಕ ಉಪನಿಷತ್ತಿನ ವಾಕ್ಯ. ಇದರ ಸರಳವಾದ ಅರ್ಥ ವಿಗ್ರಹಾರಾಧನೆ ಎಡೆಗೆ. ವಿಗ್ರಹದಲ್ಲಿ ಚೈತನ್ಯವನ್ನು ತುಂಬಬೇಕಷ್ಟೆ.

'ಹೃತ್‌ಸ್ಥಂ ದೇವಂ ಸಮಾವಾಹ್ಯ ಬಹಿರ್ ಬಿಂಬೇ ನಿಯೋಜಯೇತ್'

ಇದು ಯೋಗ ದೀಪಿಕೆಯ ವಿವರಣೆ. ತನ್ನ ಹೃದಯದಲ್ಲಿರುವ ದೇವರನ್ನು ವಿಗ್ರಹದಲ್ಲಿ ಪ್ರತಿಷ್ಠಾಪಿಸಬೇಕು. ಅವನಿಗೆ ಉಪಚಾರಾದಿಗಳು ಸಲ್ಲಬೇಕು. ಇದು ವಿಗ್ರಹಾರಾಧನೆಯ ಹಾದಿ.

ಆದರೆ ಇವೆಲ್ಲವನ್ನೂ ಮೀರಿ ಸಾಧಿಸುವಂಥದ್ದು ಕೈವಲ್ಯ ಅಥವಾ ಸಮಾಧಿ, ಯೋಗದ ಅಂತಿಮಹಂತ. ಇದೇ ನಾರಾಯಣ ಸಾಯುಜ್ಯ, ಅಥವಾ ಮುಮುಕ್ಷತ್ವ. ಮುಕ್ತಿಕೋಪನಿಷತ್ತು ಮುಕ್ತಿಗೆ ನಾಲ್ಕು ಹಂತಗಳನ್ನು ವಿವರಿಸುತ್ತದೆ. ಸಾಲೋಕ್ಯ, ಸಾನ್ನಿಧ್ಯ, ಸಾರೂಪ್ಯ ಮತ್ತು ಸಾಯುಜ್ಯ – 'ಸಾಲೋಕ್ಯಾದಿ ವಿಭಾಗೇನ ಚತುರ್ಧಾ ಮುಕ್ತಿರೀರಿತಾ'. ವಿಗ್ರಹಾರಾಧನೆಯ ಮೂಲ ಅದ್ವೈತಪರವೆನಿಸಿದರೆ ಭಕ್ತಿಮಾರ್ಗಕ್ಕೆ ದ್ವೈತ ಮೂಲವೆನಿಸುತ್ತದೆ. ೬೭

**ಉಪಸಂಹಾರ :** ತತ್ವಶಾಸ್ತ್ರಗಳ ಅಧ್ಯಯನದಿಂದ ಭಾರತೀಯ ತತ್ವಶಾಸ್ತ್ರಜ್ಞರು ಹೆಚ್ಚಾಗಿ ನಿರೀಶ್ವರವಾದಕ್ಕೆ ಒತ್ತು ಕೊಟ್ಟಿದ್ದರೆಂದು ತಿಳಿಯಬಹುದು. ಹೀಗಿದ್ದೂ ಇತಿಹಾಸದ ಉದ್ದಕ್ಕೂ ಜನಸಾಮಾನ್ಯರು ದೇವರಲ್ಲಿ ಹೆಚ್ಚು ನಂಬಿಕೆ ಇರಿಸಿಕೊಂಡಿದ್ದನ್ನು ಕಾಣಬಹುದು. ನ್ಯಾಯ. ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸ ಮತ್ತು ವೇದಾಂತಗಳು ಆಸ್ತಿಕ ದರ್ಶನಗಳು. ಚಾರ್ವಾಕ, ಬೌದ್ಧ, ಜೈನಾದಿಗಳು ನಾಸ್ತಿಕದರ್ಶನಗಳು.

ಬೌದ್ಧ ಧರ್ಮ ನಾಸ್ತಿಕವಾದವೆನಿಸಿದರೂ, ಬುದ್ಧನ ಕಾಲಾನಂತರದಲ್ಲಿ ಬುದ್ಧನನ್ನು ಪೂಜಾರ್ಹನನ್ನಾಗಿ ಸ್ವೀಕರಿಸಿತು. ವಜ್ರಯಾನ ಪಂಥವು ತನ್ನ ಒಡಲಲ್ಲಿ ಹಲವಾರು ಬಗೆಯ ತಾಂತ್ರಿಕ ದೇವತೆಗಳನ್ನು ಸೃಷ್ಟಿಸಿತು.

ಜೈನಧರ್ಮದಲ್ಲಿಯೂ, ಇಪ್ಪತ್ತನಾಲ್ಕು ತೀರ್ಥಂಕರರೊಂದಿಗೆ, ಶಾಸನ ದೇವತೆಗಳು, ಯಕ್ಷ ಯಕ್ಷಿಯರು ಸೇರ್ಪಡೆಗೊಂಡರು. ಇವರೆಲ್ಲರೂ ಪೂಜಾರ್ಹರೆನಿಸಿದರು. ಬೌದ್ಧ ಧರ್ಮ ಹಾಗೂ ಜೈನಧರ್ಮಗಳ ಪ್ರಭಾವ ವಲಯದಲ್ಲಿ ಹಿಂದೂಧರ್ಮವು ಇಕ್ಕಟ್ಟಿನ ಪರಿಸ್ಥಿತಿಯನ್ನು ಅನುಭವಿಸಿದ್ದು ಸ್ಪಷ್ಟ. ತತ್ವಶಾಸ್ತ್ರಜ್ಞರಿಗೂ ಜನಸಾಮಾನ್ಯರಿಗೂ ನಡುವೆ ಭಾರಿ ಅಂತರವಿತ್ತು. ಇವರ ನಡುವೆ ಸಂಪರ್ಕಸೇತುವೆ ಎನಿಸಿದ್ದು ಪುರಾಣ, ಆಗಮಾದಿಗಳ ರಚನೆಗಳು. ತಾತ್ವಿಕ ಅಂಶಗಳು ಏನೇ ಇದ್ದರೂ, ಅದನ್ನು ಪರೋಕ್ಷವಾಗಿ ಅಳವಡಿಸಿ, ತಿಳಿಗೊಳಿಸಿ ಶಾಸ್ತ್ರರೂಪ ಕೊಟ್ಟು ಬೆಳೆಸಿದ್ದನ್ನು ಕಾಣಬಹುದು.

'ಏಕಂ ಸತ್ ವಿಪ್ರಾಃ ಬಹುಧಾ ವದಂತಿ'

ಎನ್ನುವಲ್ಲಿ ಗುರುತಿಸಲಾಗುವ ವೈದಿಕ ದೇವತೆಗಳೇ ಬೇರೆ; ಇಂದು ಪೂಜಾರ್ಹರಾಗಿರುವ ದೇವದೇವತೆಗಳೇ ಬೇರೆ ಎಂದು ಗಮನಿಸಬಹುದು.

ಸತ್ಯದ ತುಣುಕುಗಳಾಗಿ ಪ್ರಕಟಗೊಂಡ ವೈದಿಕ ದೇವತೆಗಳು, ಪ್ರಾಕೃತಿಕ ಶಕ್ತಿಗಳ ಸಂಕೇತವೆನಿಸಿ ಯಜ್ಞಯಾಗಾದಿಗಳಲ್ಲಿ ಪೂಜೆಗೊಂಡರು. ಮನುಷ್ಯನ ಅವಶ್ಯಕತೆಗಳಿಗೆ ಅನುಗುಣವಾಗಿ ಕೆಲವು ವೈದಿಕ ದೇವತೆಗಳು ರೂಪಾಂತರಗೊಂಡು ಹಲವು ಅವತಾರಗಳನ್ನು ಧರಿಸಿ, ವಿಗ್ರಹಾರಾಧನೆಗೆ ಅಣಿಮಾಡಲ್ಪಟ್ಟವು. ಇವನ್ನು ಪೌರಾಣಿಕ ಅಥವಾ ಆಗಮಿಕ

ದೇವತೆಗಳೆಂದು ಗುರುತಿಸಬಹುದು. ಇವಲ್ಲದೆ ತಂತ್ರ ಶಾಸ್ತ್ರಾನುಸಾರ, ಅವುಗಳ ಅವಶ್ಯಕತೆಗೆ ತಕ್ಕಂತೆ ತಾಂತ್ರಿಕ ಆರಾಧನೆಗಾಗಿ ನಿರ್ಮಾಣಗೊಂಡ ದೇವತಾ ಮೂರ್ತಿಗಳನ್ನು ತಾಂತ್ರಿಕ ದೇವತೆಗಳೆನ್ನುತ್ತಾರೆ.

ಇಂದ್ರ, ಅಗ್ನಿ, ಯಮ, ವರುಣ ಇತ್ಯಾದಿ ದೇವತೆಗಳು ವೈದಿಕ ದೇವತೆಗಳು. ಇವರ ವಿವರಣೆಗಾಗಿ ವೈದಿಕ ಸಾಹಿತ್ಯವನ್ನೇ ಅವಲಂಬಿಸಬೇಕು. ವಿಷ್ಣುವಿನ ಚತುರ್ವಿಂಶತಿ ಮೂರ್ತಿಗಳು, ಶಿವನ ಷೋಡಶ ಲೀಲಾಮೂರ್ತಿಗಳು, ಇವು ಪೌರಾಣಿಕ ಅಥವಾ ಆಗಮೋಕ್ತ ದೇವತೆಗಳೆನ್ನಬಹುದು. ಶಾಕ್ತಸಂಪ್ರದಾಯದಲ್ಲಿ ತಾಂತ್ರಿಕ ದೇವತೆಗಳು ಮೈದಳೆದಿದ್ದನ್ನು ಕಾಣಬಹುದು. ಇವು ಮೂರ್ತಿಶಿಲ್ಪಕ್ಕೆ ನಾಂದಿಯೆನಿಸಿವೆ.

**ಆಧಾರ ಗ್ರಂಥಗಳು ಮತ್ತು ಟಿಪ್ಪಣಿಗಳು:**


೧. ಎ.ಎ.ಮ್ಯಾಕ್‌ಡೊನೆಲ್, ವೇದಿಕ್‌ರೀಡರ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೮೧ ಪು: ೧೨

೨. ಎಫ್. ಮಾಕ್ಸ್‌ಮುಲ್ಲರ್(ಸಂ), ಋಗ್ವೇದಸಂಹಿತಾ, ಸಂಪುಟ : ೧ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ, ೧೯೮೩, ಪು: ೭೧೭ (೧.೧೬೪.೪೬)

೩. ಭಗವದ್ಗೀತೆ, ಅ.೩, ಶ್ಲೋ ೧೪-೧೫

೪. ಅದೇ., (೯.೨೦)

೫. ಋಗ್ವೇದ ಸಂಹಿತಾ, ಸಂಪುಟ-೪ ಪು: ೨೨೪ (೧೦.೭೨. ೩-೪)

೬. ಅದೇ.,

೭. ಅದೇ., ಪು : ೩೧೮ (೧೦.೯೧.೧)

೮. ಅದೇ., ಸಂ.೧, ಪು: ೩೯೮ (೧.೮೯.೧೦)

೯. ತೈತ್ತರಿಯೋಪನಿಷತ್ (೨೦೦೩) ಪು: ೬೦, ಏಳನೆಯ ಅನುವಾಕ.

೧೦. ಐತರೇಯೋಪನಿಷತ್ (೨೦೦೦) ಪು: ೭, (೧.೧.೧)

೧೧. ಬೃಹದಾರಣ್ಯಕೋಪನಿಷತ್ (೨೦೦೮) ಪು: ೪೩ (೧.೪.೧)

೧೨. ಶ್ವೇತಾಶ್ವರೋಪನಿಷತ್ (೨೦೦೩) ಪು: ೩೮ (೩.೧೩)

೧೩. ಬೃಹದಾರಣ್ಯಕೋಪನಿಷತ್ (೨೦೦೮) ಪು: ೧೬೧ (೨.೫.೧೮)

೧೪. ಎಚ್.ಪಿ. ವೆಂಕಟರಾವ್ (ಸಂ)ಋಗ್ವೇದ ಸಂಹಿತೆ, (ಭಾಗ-೨೯) ಮೈಸೂರು, ೧೯೫೪ ಪು: ೬೮೨-೭೧೬

೧೫. ಭಗವದ್ಗೀತೆ, (೧೫.೧೬-೧೭)

೧೬. ಕಠೋಪನಿಷತ್, (೨೦೦೧) ಪು : ೭೮ (೨.೫.೧೦)

೧೭. ಅದೇ., ಪು: ೭೨ (೨.೫.೧)

೧೮. ಭಗವದ್ಗೀತೆ, (೧೪.೫)

೧೯. ಅದೇ., (೧೮.೪೦)

೨೦. ಸ್ವಾಮಿ ವಿರೂಪಾಕ್ಷಾನಂದ (ಸಂ), ಸಾಂಖ್ಯಕಾರಿಕಾ, ಶ್ರೀರಾಮಕೃಷ್ಣಮಠ, ಮದ್ರಾಸ್ (೨೦೦೬) ಪು: ೪೫, ಶ್ಲೋಕ: ೧೩

೨೧. ಅದೇ., ಪು: ೪೨, ಶ್ಲೋ: ೧೨

೨೨. ಅದೇ., ಪು: ೬೩, ಶ್ಲೋ: ೨೧

೨೩. ಅದೇ., ಪು: ೫೯, ಶ್ಲೋ: ೧೮

೨೪. ಬೃಹದಾರಣ್ಯಕೋಪನಿಷತ್, ಪು: ೧೨೫(೨.೩.೧)
(ಉಪನಿಷತ್ ಗ್ರಂಥಗಳು ಸ್ವಾಮಿ ಆದಿದೇವಾನಂದರಿಂದ ಸಂಪಾದಿಸಲ್ಪಟ್ಟಿದ್ದು ಶ್ರೀರಾಮಕೃಷ್ಣಾಶ್ರಮ, ಮೈಸೂರು ಇವರಿಂದ ಪ್ರಕಟಗೊಂಡಿವೆ)


❐

# ಸಂಸ್ಕೃತ ಪ್ರಹಸನಗಳು : ಒಂದು ಅಧ್ಯಯನ

● ಎಸ್. ಮಲ್ಲನಗೌಡ

"ಆಂಗಿಕಂ ಭುವನಂ ಯಸ್ಯ ವಾಚಿಕಂ ಸರ್ವವಾಙ್ಮಯಮ್ ।
ಆಹಾರ್ಯಂ ಚಂದ್ರ ತಾರದಿ ತನ್ನುಮಸ್ಸಾತ್ವಿಕ ಶಿವಮ್"॥

*–ಸಂಗೀತ ರತ್ನಾಕರ*

**ಈ** ಮೇಲಿನ ಶ್ಲೋಕವನ್ನು ನಾವು ಅರ್ಥೈಸಿದಾಗ ನಮಗೆ ತಿಳಿದುಬರುವುದೇನೆಂದರೆ : ಯಾವುದೇ ನಟನೊಬ್ಬನು ತನ್ನ ನಟನೆಯಲ್ಲಿ ಅಥವಾ ಪಾತ್ರದಲ್ಲಿ ತೊಡಗಿದಾಗ ರಸಾದಿಭಾವ ಗಳನ್ನೊಳಗೊಂಡ ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ವಿಕ ಎಂಬ ನಾಲ್ಕು ತರಹದ ಅಭಿನಯಗಳ ಮೂಲಕ ಪ್ರೇಕ್ಷಕಪ್ರಭುಗಳಿಗೆ ಒಂದು ವಿಶಿಷ್ಟ ರೀತಿಯ ಹೊಸದಾದ ಸಂದೇಶವನ್ನು ರವಾನಿಸುವುದನ್ನು ನಾವು ಇಲ್ಲಿ ಮನಗಾಣಬಹುದು, ಇದನ್ನೇ ನಾವು ನಾಟ್ಯ, ನಾಟಕ, ರೂಪಕ ಇತ್ಯಾದಿ ಶಬ್ದಗಳಿಂದ ಕರೆಯುತ್ತೇವೆ.

ನಾಟಕವು ಮನುಷ್ಯನನ್ನು ಮೇಲಿನ ಗುಣಗಳ ಮೂಲಕ ತನ್ನಡೆಗೆ ಸೆಳೆದುಕೊಳ್ಳುತ್ತದೆ. ಆದ್ದರಿಂದ ಮನುಷ್ಯನು ಕಾವ್ಯದ ಪಠಣದಿಂದ ಸಿಗದ ಆನಂದವನ್ನು 'ನಾಟಕ' ನೋಡುವುದರಿಂದ ಪಡೆಯುತ್ತಾನೆ. ಇದು ಸಾಧಾರಣ ವ್ಯಕ್ತಿಯ ಮೇಲೂ ಪರಿಣಾಮವನ್ನುಂಟು ಮಾಡುತ್ತದೆ. ಅವನನ್ನು ಸಮಾಜದಲ್ಲಿ ಮೇಲ್‌ಸ್ಥರಕ್ಕೆ ಕೊಂಡೊಯ್ಯುತ್ತದೆ. ಭರತಾಚಾರ್ಯರು ತಮ್ಮ 'ನಾಟ್ಯಶಾಸ್ತ್ರ' ಗ್ರಂಥದಲ್ಲಿ ಹೇಳಿರುವ ವಾಕ್ಯ ನೆನಪಿಗೆ ಬರುತ್ತದೆ, "ತ್ರೈಲೋಕ್ಯಸ್ಯಾಸ್ಯ ಸರ್ವಸ್ಯ ನಾಟ್ಯಂ ಭಾವಾನುಕೀರ್ತನಮ್". ಅಂದರೆ: "ಈ ನಾಟ್ಯದಲ್ಲಿ ಮೂರು ಲೋಕಗಳ ಭಾವನೆಗಳೂ ಕೀರ್ತಿತ ವಾಗಿರುತ್ತವೆ." ಆದ್ದರಿಂದ ಇದು ಅಜ್ಞಾನಿಗಳಿಗೆ ಜ್ಞಾನದ ಸಂಪತ್ತನ್ನು ತುಂಬಿಸುತ್ತದೆ. ವಿದ್ವಾಂಸರ ವಿದ್ವತ್ತನ್ನು ಹೆಚ್ಚಿಸುತ್ತದೆ. ಒಟ್ಟಾರೆಯಾಗಿ ಮಾನವನ ಸರ್ವತೋಮುಖದ ಏಳಿಗೆಗೆ ಸಹಕಾರಿ ಯಾಗಿದೆ.

"ಧನಂಜಯ"ನು ತನ್ನ 'ದಶರೂಪಕ'ದ ಗ್ರಂಥದಲ್ಲಿ "ರೂಪಕಂ ತತ್ಸಮರೋಪಾತ್" ಎಂಬ ವಾಕ್ಯವನ್ನು ನುಡಿದಿದ್ದಾನೆ. ಅಂದರೆ, ನಟನು ಯಾವುದೆ ಪಾತ್ರಕ್ಕೆ ಆ ಪಾತ್ರವು ಹೊಂದಿರುವ ಗುಣಲಕ್ಷಣಗಳನ್ನು ಅಥವಾ ಪಾತ್ರದ ರೂಪರೇಷೆಗಳನ್ನು – ಭಾವಾದಿಗಳ ಮೂಲಕ ತುಂಬಿಕೊಡುವವನು. ಅವನು ಕೊಡುವ ರೂಪವನ್ನು 'ರೂಪಕ' ಎಂದು ಕರೆಯಬಹುದು. ಸಾಮಾನ್ಯವಾಗಿ 'ನಾಟಕ' ರೂಪಕಗಳಲ್ಲಿ ಒಂದು ಒಳಭೇದವಾದರೂ ಎಲ್ಲ ರೂಪಕಗಳನ್ನು 'ನಾಟಕ'ಗಳೆಂದು ಕರೆಯುವ ವಾಡಿಕೆ ಇದೆ. ಧನಂಜಯನು ದಶರೂಪಕದಲ್ಲಿ–

> "ನಾಟಕಂ ಸಪ್ರಕರಣಂ ಭಾಣಃ ಪ್ರಹಸನಂ ಡಿಮಃ ।
> ವ್ಯಾಯೋಗ ಸಮವಕಾರೌ ವೀಥ್ಯಂಕೇಹಾಮೃಗಾ ಇತಿ" ॥

ಎಂದು ಹೇಳುವ ಮೂಲಕ ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಮತ್ತು ಈಹಾಮೃಗ ಎಂದು ೧೦ ಪ್ರಕಾರದ ರೂಪಕಗಳನ್ನು ಗುರ್ತಿಸಿದ್ದಾನೆ. ಇವುಗಳಲ್ಲಿ ಅತಿ ಹೆಚ್ಚು ಜನಮನ್ನಣೆಗೆ ಪಾತ್ರವಾಗಿರುವ ಪ್ರಕಾರಗಳು 'ನಾಟಕ', 'ಪ್ರಕರಣ', ಮತ್ತು 'ಪ್ರಹಸನ'ಗಳು.

ಭರತಮುನಿಯಿಂದ ಹಿಡಿದು ಇಲ್ಲಿಯವರೆಗಿನ ಎಲ್ಲ ಲಾಕ್ಷಣಿಕರಿಂದ ವಿಶೇಷವಾಗಿ ವಿಭಿನ್ನ ರೀತಿಯಲ್ಲಿ ಗುರುತಿಸಲ್ಪಟ್ಟ ಪ್ರಕಾರ 'ಪ್ರಹಸನ'. ಇತರ ಯಾವುದೇ ರೂಪಕಗಳಲ್ಲಿ ವಿಧಗಳಾಗಲಿ, ಪ್ರಭೇದಗಳಾಗಲಿ ಕಂಡುಬಂದಿಲ್ಲ.

"ಪ್ರಹಸನ" ಎಂಬ ಶಬ್ದವು 'ಹಸ್' ಎಂಬ ಧಾತು 'ಪ್ರ' ಪ್ರತ್ಯಯವನ್ನು ಹೊಂದಿರುವುದು ಮತ್ತು ಅಂತ್ಯದಲ್ಲಿ 'ಲ್ಯುಟ್' ಎಂಬ ಪದವನ್ನು ಹೊಂದಿದೆ. ಅದು ಉಪಕರಣ, ಅಥವಾ, ಗುಣಲಕ್ಷಣ, ಆಸ್ತಿ, ಮಾಲು ಎಂಬ ಅರ್ಥಗಳನ್ನು ಸೂಚಿಸುವುದು.

ಪ್ರಹಸನಗಳು ಈಗಿನ ಸಮಾಜದ ಸ್ಥಿತಿಗತಿಗಳನ್ನು (ಅಂದರೆ: ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ನೈತಿಕ) ವಿನೋದಾತ್ಮಕ ಹಾಗೂ ವಿಡಂಬನಾತ್ಮಕ ರೀತಿಯಲ್ಲಿ, ಅದರ ರೂಪದಲ್ಲಾಗುವ ಬದಲಾವಣೆಯನ್ನು ಕಾಲದಿಂದ ಕಾಲಕ್ಕೆ ಘಟನೆಗಳನ್ನು ತೋರ್ಪಡಿಸುತ್ತವೆ. ಅವುಗಳು ಸ್ವಭಾವತಃ ತಮ್ಮನ್ನು ತಾವು ವಿಮರ್ಶಿಸಿಕೊಂಡು ನಂತರ ಅನೇಕಾನೇಕ ಹಂತಗಳನ್ನು ದಾಟಿ ಪ್ರಸ್ತುತ ಹಂತವನ್ನು ತಲುಪಿರುತ್ತವೆ.

'ಹಾಸ್ಯ' ರಸವು ಪ್ರಹಸನದ ಪ್ರಧಾನ ರಸವಾಗಿದೆ. ಇದರ ವಿಷಯವಸ್ತು ಕಲ್ಪಿತವಾದದ್ದು, ಕೀಳು ಜನರ ಲಘುಚಾರಿತ್ರ್ಯವನ್ನು ಒಳಗೊಂಡಿರುತ್ತದೆ. ಇದರಲ್ಲಿ ಭಾಣದಂತೆ ಸಂಧಿ, ಸಂಧ್ಯಂಗ ಮತ್ತು ಲಾಸ್ಯಾಂಗಗಳ ಗುಣಗಳಿದ್ದು, ಇದರಲ್ಲಿ ವಿಷ್ಕಂಭಕ, ಪ್ರವೇಶಕಾದಿಗಳಿರುವುದಿಲ್ಲ, ಬ್ರಾಹ್ಮಣ, ಪಾಖಂಡಿ, ಚೇಟ, ಚೇಟಿಯರು, ವಿಟ, ಕಂಚುಕೀ ತಾಪಸಾದಿಯರ ಪಾತ್ರಗಳು ಇದರಲ್ಲಿ ಕಂಡುಬರುವವು. ಇದೊಂದು ಸಾಮಾಜಿಕ ವ್ಯಂಗ್ಯವನ್ನು ತಿಳಿಸುವಂಥ ರೂಪಕ ಪ್ರಭೇದವಾಗಿದೆ.

ಸಂಸ್ಕೃತ ಸಾಹಿತ್ಯದಲ್ಲಿ 'ಪ್ರಹಸನ'ದ ಗುಣಲಕ್ಷಣಗಳನ್ನ ತಿಳಿಸುವಂತಹ ಉಪಲಬ್ಧಗ್ರಂಥ ಗಳಿರುವುದು ವಿರಳ. ಅವುಗಳಲ್ಲಿ ಪ್ರಮುಖವಾದವು; ಭರತಮುನಿಯ 'ನಾಟ್ಯಶಾಸ್ತ್ರ',

'ಧನಂಜಯ'ನ 'ದಶರೂಪಕ', ಶಾರದಾತನಯನ 'ಭಾವಪ್ರಕಾಶ', ವಿದ್ಯಾನಾಥನ 'ಪ್ರತಾಪರುದ್ರೀಯ', ವಿಶ್ವನಾಥನ 'ಸಾಹಿತ್ಯದರ್ಪಣ', ಇತ್ಯಾದಿ, ಈ ಗ್ರಂಥಗಳಲ್ಲಿ 'ಪ್ರಹಸನ'ದ ಕುರಿತಾಗಿ ಹಲವಾರು ಅಭಿಪ್ರಾಯಗಳು ವ್ಯಕ್ತವಾಗಿವೆ.

"ತದ್ವತ್ ಪ್ರಹಸನಂ ತ್ರೇಧ ಶುದ್ಧ ವೈಕೃತ್ಯಸಂಕೀರ್ಣೈಃ"॥

'ಪ್ರಹಸನ'ವು ಮೂರು ಪ್ರಮುಖ ಒಳಪ್ರಭೇದಗಳನ್ನು ಒಳಗೊಂಡಿದೆ. ಅವು ಇಂತಿವೆ: ಶುದ್ಧ, ಸಂಕೀರ್ಣ, ವಿಕೃತ ಎಂದು ವಿಂಗಡಿಸಲಾಗಿದೆ.

೧. **ಶುದ್ಧ ಪ್ರಹಸನಮ್** : ಈ ಪ್ರಕಾರವು ಗೌರವಾನ್ವಿತ ವಿಷಯವಸ್ತುವನ್ನು ಹೊಂದಿದ್ದು, ಸಂಭಾಷಣೆಯು ಉಲ್ಲಾಸಭರಿತವಾಗಿರುತ್ತದೆ. ಮಾನವನು ತಪ್ಪು ಹೆಜ್ಜೆ ಇಡುವುದನ್ನು ಅಲ್ಲಗೆಳೆಯುವಂತಹ ಸದೃಢ ಕಥಾನೆಲೆಗಟ್ಟನ್ನು ಹೊಂದಿದ್ದು, ಪೂಜನೀಯ ಯತಿಗಳು, ಬೌದ್ಧಭಿಕ್ಷುಗಳು, ತಾಪಸರು, ಬ್ರಾಹ್ಮಣರು ಹಾಗೂ ಕೆಳವರ್ಗವನ್ನು ಪ್ರತಿನಿಧಿಸುವಂತಹ ಪಾತ್ರಗಳು ಇದರಲ್ಲಿರುತ್ತವೆ. ಈ ಪ್ರಕಾರದ ಪ್ರಹಸನಗಳಿಗೆ ಉದಾಹರಣೆಗಳೆಂದರೆ: ಭಗವದಜ್ಜುಕೀಯ, ಮತ್ತವಿಲಾಸ ಪ್ರಹಸನ, ಹಾಸ್ಯಚೂಡಾಮಣಿ, ಮದನಕೇತುಚರಿತ ಇತ್ಯಾದಿ.

೨. **ಸಂಕೀರ್ಣಪ್ರಹಸನಮ್** : ಇದರ ವಿಷಯವಸ್ತು ನಿತ್ಯ ಸಮಾಜದಲ್ಲಿ ನಡೆಯುವ ಡಂಭಾಚಾರದ ವಾರ್ತೆಯನ್ನು ಒಳಗೊಂಡಿದ್ದು, ಧೂರ್ತ ಮತ್ತು ವಿಟರ ನಡುವೆ ನಡೆಯುವ ಸಂವಾದವನ್ನು ಅಶ್ಲೀಲ ಎನ್ನಿಸುವ ವಿಷಯವನ್ನು ಹೊಂದಿರುತ್ತದೆ. ಇಂಥ ಪ್ರಹಸನಗಳಲ್ಲಿ ಹೆಚ್ಚಿನವು ಏಕಾಂಕಗಳಿಂದ ಕೂಡಿವೆ. ಇವುಗಳಲ್ಲಿ ರಾಜನಿಂದ ಹಿಡಿದು ಜನಸಾಮಾನ್ಯರವರೆಗಿನ ಪಾತ್ರಗಳನ್ನು ಕಾಣಬಹುದಾಗಿದೆ. ಶಂಖಧರನ 'ಲಟಕಮೇಲಕ' ಪ್ರಹಸನ, 'ನಾಟವಟ' ಪ್ರಹಸನ. 'ಧೂರ್ತಸಮಾಗಮ' ಹಾಸ್ಯಾರ್ಣವ ಪ್ರಹಸನ ಇತ್ಯಾದಿಗಳು ಸಂಕೀರ್ಣ ಜಾತಿಗೆ ಸೇರಿದ ಪ್ರಹಸನಗಳಾಗಿವೆ.

೩. **ವಿಕೃತ ಪ್ರಹಸನ** : ಷಂಡ, ಕಂಚುಕಿ, ತಾಪಸ, ವಿಟ, ಚೇಟ, ಮೊದಲಾದ ಪಾತ್ರಗಳಿರುವ ಇದರಲ್ಲಿ ಕಾನೂನುಕರಣೆ ವಿಷಯ ಇರುವಂಥದ್ದು ಇದಾಗಿದೆ. ಆಲಂಕಾರಿಕರ ಅಭಿಪ್ರಾಯದ ಮೇರೆಗೆ ಈ ಪ್ರಭೇದ ಹುಟ್ಟಿತೆಂದು ಹೇಳಬಹುದಾಗಿದೆ.

ಪ್ರಹಸನಗಳು ಈಗಿನ ಸಮಾಜಕ್ಕೆ ಒಳ್ಳೆಯ ಸಂದೇಶವನ್ನು ನೀಡುವಂಥವುಗಳಾಗಿವೆ. ಕೆಲ ಪ್ರಾಚೀನ ಪ್ರಹಸನಗಳು ಆ ಸಮಯದಲ್ಲಿನ ಭಾರತದ ಸಂಸ್ಕೃತಿ, ಸಂಪ್ರದಾಯ, ಸಾಮಾಜಿಕ ಜೀವನ ಮತ್ತು ಅಲ್ಲಿನ ಪದ್ಧತಿ ಕುರಿತು ಹೇಳಿ ಈಗಿನ ಸಮಾಜದ ಸುಧಾರಣೆಗೆ ಮಾರ್ಗದರ್ಶಿಯಾಗಿವೆ. ಅಂತವುಗಳಲ್ಲಿ 'ಬೋಧಾಯನ' ಕವಿ ರಚಿಸಿದ 'ಭಗವದಜ್ಜುಕೀಯ' ಪ್ರಹಸನವು ಅತಿ ಪ್ರಮುಖವಾದುದು. ಇದು ಆಗಿನ ಸಂಸ್ಕೃತಿಯನ್ನು ಎತ್ತಿಹಿಡಿಯುವ ಪ್ರಹಸನವಾಗಿದೆ. ದಕ್ಷಿಣ ಭಾರತದ ಪಲ್ಲವರ ಸಾಮ್ರಾಜ್ಯದ ಪ್ರಮುಖ ಅರಸನಾದ ಮಹೇಂದ್ರವಿಕ್ರಮವರ್ಮನಿಂದ ರಚಿತವಾದ 'ಮತ್ತವಿಲಾಸ' ಪ್ರಹಸನ (ಕ್ರಿ.ಶ. ೭ನೆಯ ಶತಮಾನ) ಮತ್ತು ಶಂಖಧರಕವಿರಾಜ ರಚಿತವಾದ 'ಲಟಕಮೇಲಕ' ಪ್ರಹಸನ (ಕ್ರಿ.ಶ. ೧೨ನೆಯ ಶತಮಾನ) ಎಂಬ ಈ ಎರಡು ಆ ವೇಳೆಯಲ್ಲಿ ರಚನೆಯಾದ ಇತರ ಮುಖ್ಯ ಪ್ರಹಸನಗಳಾಗಿವೆ. ಅತಿ

ಹೆಚ್ಚು ಪ್ರಹಸನಗಳು ರಚನೆಯಾದುದು ೧೫ನೆಯ ಶತಮಾನದ ನಂತರವೆಂದೇ ಹೇಳಬೇಕು. ೨೦ನೆಯ ಶತಮಾನದಲ್ಲಿ ಬರುವಂತಹ ಕೆಲವು ಪ್ರಹಸನಕಾರರು ಸಂಸ್ಕೃತ ಸಾಹಿತ್ಯ ಕ್ಷೇತ್ರಕ್ಕೆ ಅಮೋಘವಾದ ಕೊಡುಗೆಯನ್ನು ನೀಡಿದ್ದಾರೆ ಎಂದರೆ ತಪ್ಪಾಗಲಾರದು.

ಪ್ರಹಸನಗಳಲ್ಲಿ ಲಘು ಹಾಸ್ಯವಿರುವುದನ್ನು ಕಾಣಬಹುದು. ಅದು ನೆಮ್ಮದಿಯ ಜೀವನವನ್ನು ಹೇಗೆ ನಡೆಸಬೇಕೆಂಬುದನ್ನು ತಿಳಿಯಪಡಿಸುತ್ತದೆ. ಇದರಿಂದ ಇದು ಪ್ರೇಕ್ಷಕರನ್ನು ಅಯಸ್ಕಾಂತದಂತೆ ಸೆಳೆಯುತ್ತದೆ, ತನ್ನ ಪ್ರಭಾವವನ್ನು ತೋರುತ್ತಿದೆ. ಇದು ಬಹಳ ಸಹಕಾರಿಯಾಗಿದೆ. ಈ ಪ್ರಹಸನದ ತಂತ್ರಗಳನ್ನು ಆಧುನಿಕ ಕಾಲದ ನಾಟಕಕಾರರೂ ಬಳಸಿಕೊಳ್ಳುತ್ತ ಅದರ ಮಹತ್ವವನ್ನು ಎತ್ತಿ ಹೇಳಿದ್ದಾರೆ.

**ಪರಾಮರ್ಶನ ಗ್ರಂಥಗಳು :**


೧. ಭರತನ ನಾಟ್ಯಶಾಸ್ತ್ರ, ಆದ್ಯರಂಗಾಚಾರ್ಯ, ಅಕ್ಷರಪ್ರಕಾಶನ, ಸಾಗರ, ಹೆಗ್ಗೋಡು ೧೯೮೪

೨. ಧನಂಜಯನ ದಶರೂಪಕ, ಕನ್ನಡಕ್ಕೆ ಕೆ.ವಿ. ಸುಬ್ಬಣ್ಣ, ಅಕ್ಷರ ಪ್ರಕಾಶನ, ಸಾಗರ, ಹೆಗ್ಗೋಡು

೩. ಪ್ರಹಸನ ಇನ್ ಸಂಸ್ಕೃತ ಲಿಟರೇಚರ್, ಡಾ. ರಾಮರತ್ನಮ್, ಕಾವ್ಯಾಲಯ ಪಬ್ಲಿಕೇಷನ್ಸ್ ಮೈಸೂರು-೧೯೮೭

೪. ಸಂಸ್ಕೃತ ನಾಟಕ, ಡಾ. ಲೀಲಾ ಎಸ್. ಆರ್, ಗಾಂಧಿಭವನ ಕೇಂದ್ರ ಬೆಂಗಳೂರು-೨೦೦೨.

೫. ಸಂಸ್ಕೃತ ನಾಟಕ, ಎ.ಆರ್. ಕೃಷ್ಣಶಾಸ್ತ್ರೀ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು-೧೯೯೦.




# ಸಂಗೀತಚೂಡಾಮಣೌಃ ಓಲೆಗರಿ ಹಸ್ತಪ್ರತಿ

● *ಕೆಳದಿ ಗುಂಡಾಜೋಯಿಸ್*

೧. ರಾಗೋತ್ಪತ್ತಿ ಸ್ವರೂಪ ವೇಳಾ ವಿವರಣಂ॥ ಸಂಗೀತ ಚೂಡಾಮಣೌ ॥ಶ್ಲೋಕಃ॥ ಕಾಂಬೋದೀ ಭೈರವೀ ದೇಶೀ ಕಲ್ಯಾಣೀ ಮಾರವೀತಥಾ ॥ ಸಾವೇರೀಚಾಹರೀಕೆ ತಾರಗೌಳೀ ನಾಟಿಕಾ ತಥಾ ॥೧॥ ತೊಡೀ ಮುಖಾರೀ ಸೌರಾಷ್ಟ್ರೀ ಶಂಕರಾಭರಣಾಪರಾ॥ ಘಂಟಾರವಾ ಕಂಠರವೀಥ

೨. ನ್ವಾಸೀ ಸುಮಮಾಲಿನೀ ॥೨॥ ಮಯೂರಕಾಹಳಿಶ್ರೇಷ್ಠಾ । ಸೌಮೀಮುಖಿ ವಿಕಾಸಿತ ॥ ದ್ವಿರೆ ಪರಾವಿಣೀ ಸೀಲೀಘನೀಘನರವಾತಥಾ ॥೩॥ ತಾಪೀಚಾರಭಟೀಚ್ಚೈವ ಕೃಸಿಕೀ ಹೇಮಮಾಲಿನೀ ॥ ಸಾರಂಗರೊಗೊಗಾಂಧರ್ವೀ ಪಾಂಚಾಲೀ ಚಿತ್ತಲಾಸಿತಾ ॥೪॥ ದ್ವಾತ್ರಿಂಶದೆತೆವಸ್ಯಾಂಚ ಘನ ರಾಗಾಃ ಪ್ರಕೀರ್ತಿ

೩. ತಾಃ ॥ ಏತೆರಾಗಾಂ ಸರಸ್ವತ್ಯಾಃ ಸರ್ವಾಂಗೆಷು ಸಮುದ್ಭವಾಃ ॥೫॥ ಕಂಠ ಪ್ರಜಾತಾತಾಂ ಚಾಡೀಲಲಾಟೆ ಭೈರವೀ ತಥಾ॥ ದೇಶೀಧಂ ಮಿಲ್ಲ ಮಾಲಾಯಾಂ । ಸಂಭೂತಂ ಸುಖಕಾರಿಣೀ ॥೬॥ ಕಲ್ಯಾಣೀ ಮಾದವೀದ್ಯೆತ್ಯ ನೇತ್ರಾಭ್ಯಾಮುದಿತೆಪರೆ ॥ ಜಾತೇನಾ ಸಾಭಿಲಾಭ್ಯಾಂಚ ದ್ವೆಸಾನತೀ ಪರಾವರೀ ॥೭॥ ಕೆ

೪. ತಾರಗೌಳೀನಾಟೀತು ಶ್ರೋತ್ರಾಭ್ಯಾಂ ದ್ವೆಸಮುದ್ಭವೇ ॥ ತೊಡೀ ಮುಖಾರಿ ಸೌರಾಷ್ಟ್ರೆ ಭೃಗುರ್ಮಧ್ಯೆ ಸಮುದ್ಭವಾಃ ॥೮॥ ಬ್ರಹ್ಮರಂಧ್ರಾತ್ಸಮುದ್ಭೂತಾ ಶಂಕರಾಭರಣಾತಥಾ ॥ ರಸಜ್ಞಯಾ ಸಮುತ್ಪನ್ನಾ ವರ ಘಂಟಾರವೀ ತಥಾ ॥೯॥ ದಂತ್ತ ಪಂಕ್ತಿಃ ಸಮಾಜಜ್ಞೆ ಶ್ರೇಷ್ಠಾಕಂಠರವೀತಥಾ ॥

೫. ಧನ್ಯಾಸೀ ಸುಮಮಾಲಾತು ಕಪೋಲಾಭ್ಯಾಂ ಬಭೂವತುಃ ॥೧೦॥ ಮಯೂರಕಾಹಳೀರಾಗಃ ಸಮುಕ್ತಿ ಮುಖಿತೊ ಭವೇತ್ ॥ ದೊರ್ಭ್ಯಾ ಮುಖಾಭ್ಯಾಂ ಮೆಧಾತೆ ಮಹಿಷ್ಯಃ ಪರಮಾತ್ಮನಃ ॥೧೧॥ ದ್ವಿತಿ ಪುರಾಲಿಣಿಃ ನೀಲೀ ಘನೀತರ ತಳೋದ್ಭವಾ ॥ ಉರಸ್ಥಳಾತ್ಸಮಭವ

೬. ತ್ತಸ್ಯಾ ಘನರವೀತಥಾ ॥೧೨॥ ತಥೈವಕಾಪ್ಯಾಭಟೀವಕ್ಷೊಜಾಖ್ಯಾಂ ಸಮುದ್ಭವೆ ॥ ಸಂಜಾತಾ ಕೃಷಿಕೀತಸ್ಯಾ ನಾಭೀಕಮಲಿ ರಂಧ್ರತಃ ॥೧೩॥ ಮಧ್ಯತಃ ಸಮಭೂದೆವ್ಯಾರವ್ಯಾಸಾಹೇಮವಾಲಿನೀ ॥ ಸಾರಂಗರಾಗೋಗಾಂಧರ್ವೀ ಜೊರುಭ್ಯಾಮು

೭. ಪಾಜಗ್ಮತುಃ ॥೧೪॥ ಬಭೂವತುಃ ಪದಾಭ್ಯಾಂಚ ಪಾಂಚಾಲೀ ಚಿತ್ತಲಾಸಿಕಾ ॥ ತಸ್ಯಾ ಏಕೈಕಲೊಮ್ನಾಭಿಃ ಜಾತಾರಾಗಾಃ ಪೃಥಕ್‌ಪೃಥಕ್ ॥೧೫॥ ತ್ರಿಪದಿಟಿ ಸಂಖ್ಯಾ ಲೊಕೆಸ್ಮಿನ್ ರಾಗಾಜಾತಾಃ ಶಿವಾತ್ಮಿಕಾಃ ತಥೈವ ಚೊಪರಾಗಾಣಾಂ ತತ್ತತ್ತಾ.

೮. ಳ ಲಯಾಗಿಚ ॥೧೬॥ ತೆಷಾಂ ನಾಮಾನಚಾಭ್ಯಾತು ಮಕ್ಷಮಃ ಫಣಿರಾಡಪಿ ॥ ಎತೆಷಾಂ ರಾಗ ಭೆದಾನಾಂತ್ತಾನ ಭೆದಾಹ್ಯನೆಕಥಾ ॥೧೭॥ ಉತ್ತಮಾದಿವಿಭೆಗೆನ ನಾಭಿಕಂಠಮುಖಾದಿಷು ॥ ಏಕೈಕಂ ತ್ರಿವಿಧಂ ಪ್ರೊಕ್ತಂ ನಿಷಾದಾದಿಸ್ಮರ್ಯೆ

೯. ಶ್ಚತೆ ॥೧೮॥ ಪ್ರತ್ಯೆಕ ಮೆಷಾಂ ಸಂಗೀತೆ ತ್ರಿಫಪ್ತಿತ್ವ ಮವಾಪ್ಸ್ಯತಿ ॥ ಉದಾತ್ತಾದಿವಿಭೆದೆನ ಭವಂತ್ತಿಹಿ ಚತುರ್ವಿಧಾ ॥೧೯॥ ಲೋಕೆ ತಾನಾದ್ವಿ ಪಂಚಾಶದುತ್ತರಸ್ಥ ಶತದ್ವಯಂ॥ ಶ್ರೀ ಶ್ರೀ ॥ ವಿಶುದ್ಧ ವರ್ಣಾಕಾಂಬೊದೀತಸ್ಯಾಗ್ನಿರ್ದೆವ

೧೦. ತಾಸ್ವಯಂ ॥ ಸರ್ವತ್ರಜ್ಞೆಯಾನೀತಜ್ಞೈಸ್ಸರ್ವದಾ ಸ್ಸುಖದಾಯಿನೀ ॥೨೦॥ ಭೈರವೀ ನೀಲ ಮೆಘಾ ಭಾ ಭೈರವೊಹ್ಯಧಿದೆವತಾಃ ॥ ಕಾಲತ್ರಯೆ ಪ್ರಶಸ್ತಸ್ಯಾ ಚಾನ್ಯತ್ರ ಕಲಹಪ್ರದಾ ॥೨೧॥ ದೆಶೀಸುಧಾ ಗೌರವರ್ಣಾ । ಗೌರೀತಸ್ಯಾದಿದೆ

೧೧. ವತಾ॥ ಸಂಪತ್ಕರೀಗಾಯಕಾನಾಂ । ಗೆಯಾಸಾಸಾರ್ವಕಾಲಿಕೆ ॥೨೨॥ ಕಲ್ಯಾಣೀಕುಂಕುಮಛ್ಛಾಯಾಗೆಯಾ ಸರ್ವತ್ರಗ್ರಾಯನ್ಯೈಃ ॥ ತಸ್ಯಾಧಿ ದೆವತಾ ಲಕ್ಷ್ಮೀ ಸ್ಸರ್ವದಾ ಮಂಗಲಪ್ರದಾ ॥೨೩॥ ಮಾರವೀ ಕನಕಛ್ಛಾಯಾ । ಮಹಾಸೇ

೧೨. ನೊಧಿದೆವತಾ ॥ ಪ್ರಾತರೆವಪ್ರಶಸ್ತಾ ಸಾಚಾನ್ಯತ್ರೊ ಭದ್ರದಾಮಿನಿ ॥೨೪॥ ಸಾವೆರೀರೌಪ್ಯಸಂಕಾಶಾ । ತದಧೆಶೊಗಣೆಶ್ವರಃ ॥ ಮಧ್ಯಂಗ ತೆರವೌಶಸ್ತಾರೊಗದಾನ್ಯತ್ರ ನಿಶ್ಚಯಂ ॥೨೫॥ ಆಹರೀ ಹರಿ ನೀಲಾಭಾತಸ್ಯಾಃ ಪೂರ್ವಹರಿತ್ಪತಿಃ ॥ ಅಧೀ (ಗೆಯಾ – ಇದು ಅಂಚಿನಲ್ಲಿಬರೆದಿದೆ)

೧೩. ಶಃ ಫಣಿಹೂರ್ತಾಂತೆ ಜ್ಞೆಯಾನೀತವಿದುತ್ತಮಃ ॥೨೬॥ ಮೊಹೆನ ಮಾನವೊಮೂಢಃ ಪ್ರಭಾತೆತಾಂಪಠೆದ್ಯದಿ ॥ ಅತಿದುಃಖಮವಾಪ್ನೊತಿದೆಹಾಧಿಃ ಸಂಭವಿಷ್ಯತಿ ॥೨೭॥ ಕೆತಾರಗೌಳೀ ಕಿಂಜಲ್ಕ ವರ್ಣಾ ಕಾಲೊಧಿದೇವತಾ ॥ ಅಸ್ವಿಂ ಪ್ರಶಸ್ತಾಚಾನ್ಯತ್ರ ಸೂಚಕಾ ಮರಣಸ್ಯಚ ॥೨೮॥

೧೪. ನಾಟೀಸ್ಫಟಿಕ ಸಂಕಾಶಾ ಚಂದ್ರಸ್ತಸ್ಯಾಧಿದೇವತಾ ಪ್ರತ್ನಸ್ತಾ(***********ಇಲ್ಲಿ ಹಲವು ಲಿಪಿಗಳು ಕಾಟು ಹೊಡೆದಿದೆ) ಗಾಯನಾರಂಭೇ। ಸದಾ ಕಲ್ಯಾಣದಾಯಿನೀ ॥೩೦॥ ತೊಂಡೀ ಮಾಣಿಕ್ಯ ಸಂಕಾಶಾ ಗುರುಸ್ತಸ್ಯಾಧಿದೇವತಾ ॥ ಗಾತುಂಸಾಸಂಗ ಮೇಶಸ್ತಾ ನಾಸ್ತ್ಯನ್ಯತ್ರ ಶುಭಾಶುಭಾಃ ॥೩೦॥

೧೫. ಯಾಮುಖಾರೀ ವೇತಾಕ್ತಿಕಾಭಾ । ಭಾನುಸ್ತಸ್ಯಾಧಿದೇವತಾ ॥ ಮಧ್ಯಾನ್ಯಃ ಪರತಃ ಶಸ್ತಾ ಪ್ರಭಾತೆ ನಿಷ್ಟದಾಯಿನೀ ॥೩೧॥ ಯಾಸೌರಾಷ್ಟ್ರೀ ಪ್ರವಾಳಾಭಾ ಭಾಮಸ್ತ ಸ್ಯಾಧಿ ದೇವತಾ ॥ ಮಾಧ್ಯಂದಿನೆ ಪ್ರಶಸ್ತಾಸಾ । ಸರ್ವಾಭೀಷ್ಟ ಪ್ರದಾಯಿನೀ ॥೩೨॥

ಹಿಂಭಾಗ :

೧. ಶಂಕರಾಭರಣಾ ಶಂಖವರ್ಣಾ ಸೌಮ್ಯಾಧಿದೇವತಾ । ಸರ್ವತ್ರಗೇಯಾ ವಿದ್ವದ್ಭಿ ನೃಪವಶ್ಯಕರೀಸದಾ ॥ ೩೩॥ ಘಂಟಾರವೀ ಹರಿದ್ರಾಭಾಧಾತಾ ತಸ್ಯಾಧಿದೇವತಾ ॥ ಸಾದ್ವಯೋಃ ಸಂಧ್ಯಯೋರ್ಗೆಯಾ । ತುಲ್ಯಾನ್ಯತ್ರೆತಿಕಷ್ಟದಾ ॥೩೪॥ ಪುಷ್ಯರಾಗ ಸತುಛ್ಛಾಯಾ ಯಾಸಾಗಳ ವರಾಳಿಕಾ ॥ ರಾತ್ರೌಪ್ರಶಸ್ತಾ

೨. ವಿದ್ವದ್ಭಿರ್ಗೆಯಾನ್ಯ ತ್ರಾರ್ಥಹಾರಿಣೀ ॥೩೫॥ ಧನ್ಯಾಸೀ ವಜ್ರ ಸಂತಾಶಾವನ್ವೀಸ್ತಸ್ಯಾಧಿದೇವತಾ॥ ಗೆಯಾಯಾಮದ್ವಯಾ ತ್ವಶ್ಚಾತ್ತ್ರಾಗನರ್ಥವಿದಾಯಿನೀ ॥೩೬॥ ಸುವಾಲಿನೀ ಸುವರ್ಣಾ ಭಾಭಾರತ್ಯಸ್ಯಾಧಿದೇವತಾ ॥ ಸಾಪಿಗೆಯಾ ಪರಾನ್ವೆಚಕಪ್ಯನ್ಯತ್ರಾ ಲಾಭದಾಯಿನೀ ॥೩೭॥

೩. ಮಯೂರಕಾಹಳೀರಾಗೊ ಗೊಮೆದಿಕ ಸಮಪ್ರಭಃ ॥ ತಸ್ಯಾಧೀಶಃ ಪಾಶಹಸ್ತೊ । ಜ್ಞೆಯೊಸೌನಿಶಿ ಸೌಖ್ಯದಃ ॥ ೩೮॥ ಸೌಮಿಾ ಸೌಗಂಧಿ ಕಛ್ಛಾಯಾ ಮರುತಸ್ಯಾಧಿದೇವತಾ। ಸಾಮಾನ್ಯ ಭಾವಾ ಸರ್ವತ್ರ । ಪೌರ್ಣಾಮ್ಯಾಂಚ ವಿಶೇಷದಃ ॥೩೯॥ ಕೇಸರೀ ಪತ್ರ ಸಂಕಾಶಾಯಾಸಾಮು

೪. ಖಿಲಿತಾಸಿನೀ ॥ ಯತ್ವರಾಡ್ದೆವತಾತಸ್ಯಾ ಸಾಯಾನ್ವೆ ಶುಭದಾಯಿನೀ ॥೪೦॥ ದ್ವಿತಿಫರಾವಿಣೇರಾಗಃ ಕುಂದಪುಷ್ಪ ಸಮಪ್ರಭಃ । ಪ್ರಾತಃ ಸಂಗಮ ಮಧ್ಯಾಹ್ನೆ । ಶಸ್ತಃ ಕಾಲಾಧಿದೇವತಾ ॥೪೧॥ ನೀಲಜೀಮೂತಸಂಕಾಶಾ । ನೀಲೀನಾಮವರಾಳಿಕಾ॥ ತ

೫. ಸ್ಯಾಧೀಶೋ ನೀಲಕಂಠಃ ಕ್ಷಪಾಯಾಂ ಸುಖದಾಯಿನೀ ॥೪೨॥ ಘನೀನಾಮವರಾಲೀತು। ಖರ್ಜೂರೀ ಸದೃಶಪ್ರಭಾ ॥ ಮುಹೂರ್ತಫಟ್ಕೆಗೆಯಾಸಾ। ಬ್ರಾಹ್ಮೀ ತದಧಿದೇವತಾ ॥೪೩॥ ಅನ್ಯಾಘನವರಾಲೀತು ಚಾಂಪೆಯ ಸುಮಸಂಗಿಭಾ ॥ ಷ

೬. ಣ್ಮುಹೂರ್ತೊತ್ತರೆಶಸ್ತಾ । ಸೊಯಾನ್ವೆನಿಷ್ಟದಾಯಿನೀ ॥೪೪॥ ಕಾಪೀಕೈರವಪುಷ್ಪಭಾ । ಕಾಮಸ್ತಸ್ಯಾಧಿದೇವತಾ ॥ ಗಾತುಂ ಯೊಗ್ಯಾಸಾರ್ವಕಾಲೆ । ಕಾಮಿನಿ ಸಂಗದಾಯಿನೀ ॥೪೫॥ ಯಾಕಡಾರಾಚಾರಭಟೀವೀರಭದ್ರೊದಿದೆ

೭. ವತಾ ॥ ಪ್ರದೋಷಕಾಲೇಶಸ್ತಾಸಾ । ಮಧ್ಯಾಹ್ನೆ ನಿಷ್ಟದಾಯಿನಿ ॥೪೬॥ ಕೈಸಿಕೀ ಪದ್ಮಸಂಕಾಶಾ ಕುಂಡಲೀಶಾಧಿದೆವತಾ ॥ ದಿನಾಂತ್ಯ ಭಾಗೇಶಸ್ತಾಸಾ । ನಾನ್ಯತ್ರ ಶುಭದಾಯಿನೀ ॥೪೭॥ ಭೂರದೀಶಾ ಚಿತ್ರವರ್ಣಾ । ಗೆಯಾಸಾಹೆಮ

೮. ಮಾಲಿನೀ ॥ ಶ್ರೀ ಕಲೀಯಾ ದಿವಾರಾತ್ರಂ । ಪಂಡಿತೈರ್ಗಾನ ವೆದಿಭಿಃ ॥೪೮॥ ಸಾರಂಗಃ ಕಪಿಲ ಛ್ಛಾಯೊ। ಜಲಂ ತಸ್ಯಾಧಿದೆವತಾ॥ ಸೂತಿಭಿಃ ಸರ್ವದಾಗೆಯೊ । ನಿರಂತರ ಸುಖಿಪ್ರದಃ ॥೪೯॥

೯. ಗಾತುಂ ಯೊಗ್ಯಾ ಸದಾಧೀಶೈಶ್ಚಿತ್ತಾನಂದ ॥೫೦॥ ಪಾಂಚಾಲಿಕಾ ಪಂಚವರ್ಣಾ ನಭಸ್ತಸ್ಯಾಧಿದೆವತಾ ॥ ಸಾಯಂಗೆಯಾ ಗಾನವಿಧ್ಭಿಸ್ಸದಾರೊಗ್ಯ ಪ್ರದಾಯಿನೀ ॥೫೧॥ ಹಂಸಾಧಿದೇವತಾ ಚಿತ್ತಲಾಸಿ

೧೦. ॥೫೨॥ ಪಾಂಚಾಲಿಕಾ ಪಂಚವರ್ಣಾ । ನಭಸ್ತಸ್ಯಾಧಿ ದೇವತಾ॥ ಸಾಯಂಗೆಯಾ ಗಾನವಿಧ್ಭಿಸ್ಸದಾರೊಗ್ಯಪ್ರದಾಯಿನೀ ॥೫೧॥

೧೧. ಹರಸಾಧಿದೇವತಾಚಿತ್ತಲಾಸಿಕೀ ಚಿತ್ರವರ್ಣಿಕಾ ॥ ಗಾತುಂ ಯೊಗ್ಯಾ ಸದಾಧೀರೈಶ್ಚಿತ್ತಾನಂದ ಪ್ರದಾಯಿನೀ ॥೫೨॥ ಎತೆಷಾಂ ರಾಗಾಭೆದಾನಾಂ ಕಾಲಿಭೆದೊಪ್ಯನೆತಥಾ॥ ದೃತಮಧ್ಯ ವಿಲಂಬಾನಾಂ । ತಾನಾನ್ಯಾಹುರ್ಮನೀಷೃತಿಃ ॥೫೩॥

**ಟಿಪ್ಪಣಿ :**

ಹಸ್ತಪ್ರತಿ ನಂ: ೧೬೨; ಪ್ರಮಾಣ:೨೭-೭ x ೩ ಸೆಂ.ಮೀ. ಕೆಳದಿ ವಸ್ತುಸಂಗ್ರಹಾಲಯದ ಹಸ್ತಪ್ರತಿ ಸೂಚಿಯಲ್ಲಿ 'ಕಾವ್ಯಶಾಸ್ತ್ರ ಇತ್ಯಾದಿ ಶಾಸ್ತ್ರಗ್ರಂಥಗಳು' ಕಟ್ಟಿನಲ್ಲಿರುವ ಒಂದು ಓಲೆಪತ್ರದಲ್ಲಿರುವ ಈ ಅಸಮಗ್ರ ಕೃತಿ ಶ್ರೀ ಗುಂಡಾಜೋಯಿಸರ ಪೂರ್ವಿಕರಾದ (ತಾತ) ದಿ.ಸಾ.ಕ. ಲಿಂಗಣ್ಣಯ್ಯನವರ ಸಂಗ್ರಹದಲ್ಲಿದ್ದುದು, ಇವರು ಕೆಳದಿ ನೃಪವಿಜಯ ಕೃತಿಕಾರ ಲಿಂಗಣ್ಣ ಕವಿಯ ಪೀಳಿಗೆಯವರು. ಲಿಂಗಣ್ಣಯ್ಯನವರು "ವೀಣಾಭ್ಯಾಸಕ್ರಮ" ಕೃತಿ ರಚಿಸಿದ್ದು ಈಗ ಅಲಭ್ಯ. ಇವರ ಮಗ ದಿ॥ ಪಾ.ಕ. ನಾರಾಯಣರಾಯರು ವೀಣೆಯಲ್ಲಿ ಪ್ರಸಿದ್ಧ ವಿದ್ವಾಂಸರಾಗಿದ್ದರು. ಖ್ಯಾತ ಸಂಗೀತ ವಿದ್ವಾಂಸ ಡಾ. ಸಂಪತ್ಕುಮಾರಾಚಾರ್ಯರು ಇದು ಅಪೂರ್ವ ಹಸ್ತಪ್ರತಿಯಾಗಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ.

❐

# ವಿದ್ವಾಂಸರ ಬರೆವಣಿಗೆಯಲ್ಲಿಯೂ ಕಾಗುಣಿತದ ತಪ್ಪುಗಳು ವ್ಯಾಕರಣ ದೋಷಗಳು

● ಪ್ರೊ. ಜಿ. ಅಬ್ದುಲ್‌ಬಷೀರ್

ಇತ್ತೀಚಿನ ಕೆಲವು ವೃತ್ತಪತ್ರಿಕೆಗಳನ್ನೂ ಸಾಹಿತ್ಯ ಕೃತಿ (ಲೇಖನಗಳನ್ನೂ ಒಳಗೊಂಡಂತೆ) ಪಠ್ಯಪುಸ್ತಕಗಳನ್ನೂ ಓದುತ್ತಿದ್ದಾಗ ಇಲ್ಲಿ ಬಂದ ಕೆಲವು ವಿಚಾರಗಳನ್ನು ದಾಖಲಿಸುತ್ತಿದ್ದೇನೆ. ಸರಿ, ತಪ್ಪುಗಳ ಕಲ್ಪನೆಯೇ ಇಲ್ಲದ ನಮಗೆ ಮಕ್ಕಳನ್ನು ಸರಿದಾರಿಗೆ ತರಲು ಹೇಗೆ ಸಾಧ್ಯವಾಗುತ್ತದೆ? ಯಾವ ಶಬ್ದರೂಪ ಸರಿ, ಯಾವ ಶಬ್ದರೂಪ ತಪ್ಪು ಎಂಬುದನ್ನು ಮಕ್ಕಳಿಗೆ ಹೇಳಿಕೊಡದಿದ್ದರೆ ಅವರು ಭಾಷೆಯನ್ನು ಬಳಸುವುದಾದರೂ ಹೇಗೆ? ವಾಕ್ಯ ರಚನೆಯನ್ನು ಮಾಡುವುದಾದರೂ ಹೇಗೆ? ಅವರ ದೃಷ್ಟಿಯಲ್ಲಿ 'ತಪ್ಪುರೂಪ'ಗಳೇ 'ಸರಿಯಾದ ರೂಪ'ಗಳಾಗಿಬಿಡುವ ಸಾಧ್ಯತೆಗಳಿರುತ್ತವೆ. ಲೇಖಕರು ಸರಿಯಾದ ರೂಪಗಳನ್ನೂ ಬಳಸುತ್ತಿದ್ದಾರೆ; ತಪ್ಪಾದ ರೂಪಗಳನ್ನೂ ಬಳಸುತ್ತಿದ್ದಾರೆ. ಹೀಗಾಗಿ ಯಾವುದು ಸರಿಯಾದ ರೂಪ, ಯಾವುದು ತಪ್ಪಾದ ರೂಪ ಎಂಬುದನ್ನು ತೋರಿಸಿಕೊಡಬೇಕೆಂಬುದು ನನ್ನ ಈ ಲೇಖನದ ಉದ್ದೇಶವಾಗಿದೆ. ನಮ್ಮ ಲೇಖಕ ಮಿತ್ರರು (ಅಧ್ಯಾಪಕ ಮಿತ್ರರು) ಶಬ್ದ ಪ್ರಯೋಗಗಳಲ್ಲಿ, ವಾಕ್ಯರಚನೆಯಲ್ಲಿ ಎಂಥ ಅಸಡ್ಡೆಯನ್ನು ತೋರಿಸುತ್ತಿದ್ದಾರೆ ಎಂಬುದನ್ನು ಸ್ಮರಿಸಿಕೊಂಡರೆ ಭಯವಾಗುತ್ತದೆ, ಸಂಕಟವಾಗುತ್ತದೆ. ಇಂಥ ಬರೆವಣಿಗೆಯ ದೋಷಗಳು ಲೇಖಕರಿಗೆ (ಅಧ್ಯಾಪಕರಿಗೆ) ಅರಿವಿಲ್ಲದಂತೆ ಘಟಿಸಬಹುದು; ಅರಿವಿದ್ದೂ ಆಗಬಹುದು. ಲೇಖಕರು ತಮ್ಮ ಬರೆಹವನ್ನು ಬರೆದಾದ ಮೇಲೆ ಒಮ್ಮೆ ಕಣ್ಣಾಡಿಸಿದರೆ ಒಳ್ಳೆಯದು;

ಇಲ್ಲವೆ ಬೇರೆಯವರ ಮೂಲಕ ಒಮ್ಮೆ ಓದಿಸುವುದು ಒಳ್ಳೆಯದು. ಲೇಖಕರು ಎಚ್ಚರವಹಿಸದಿದ್ದರೆ ಶಬ್ದ ಪ್ರಯೋಗಗಳಲ್ಲಿ,

ವಾಕ್ಯರಚನೆಯಲ್ಲಿ, ವಿರಾಮ ಚಿಹ್ನೆಗಳ ಬಳಕೆಯಲ್ಲಿ ಎಂಥ ಪ್ರಮಾದಗಳಾಗುತ್ತವೆ ಎಂಬುದನ್ನು ಕೆಲವು ಉದಾಹರಣೆಗಳ ಮೂಲಕ ನೋಡಬಹುದು.

೧. 'ಶಿವರುದ್ರಪ್ಪರವರು, ಅಸ್ವಾಂನವನು, ಡಾಕ್ಟರ್‌ರವರು, ಲಂಕೇಶ್‌ರವರು, ಶಿವಣ್ಣರವರು, ಸತ್ಯನಾರಾಯಣರವರು, ಶಶಿ ಮತ್ತು ಶಿವನ್‌ರನ್ನು, ಮುಕುಂದನ್‌ರವರ, ಕುಮಾರನ್‌ರ, ಡಿಎಲ್‌ಎನ್‌ರೆಂದೇ' ಎಂಬ ಪದಗಳನ್ನು ಗಮನಿಸಿ. ಇವು ಅಪಪ್ರಯೋಗಗಳು ಮಾತ್ರವಲ್ಲ, ಭಾಷಾಸೌಮ್ಯರಹಿತವಾದ ಪದಗಳು, ಕಿವಿಗೆ ಕರ್ಕಶತೆಯ ಅನುಭವವನ್ನುಂಟು ಮಾಡುವಂಥವು. ಈ ಪದಗಳನ್ನು 'ಶಿವರುದ್ರಪ್ಪ ಅವರು, ಇಲ್ಲವೆ ಶಿವರುದ್ರಪ್ಪನವರು, ಅಸ್ವಾಮಿನವನು, ಡಾಕ್ಟರ್ ಅವರು, ಲಂಕೇಶ್ ಅವರು, ಶಿವಣ್ಣ ಅವರು ಇಲ್ಲವೆ ಶಿವಣ್ಣನವರು, ಸತ್ಯನಾರಾಯಣ ಅವರು, ಶಶಿ ಮತ್ತು ಶಿವನ್ ಅವರನ್ನು, ಮುಕುಂದನ್ ಅವರ, ಕುಮಾರನ್ ಅವರ, ಡಿಎಲ್‌ಎನ್ ಎಂದೇ' ಎಂದು ಪ್ರಯೋಗಿಸುವುದು ಸಾಧುವೆನಿಸುತ್ತದೆ. 'ಅಕಾರಾಂತ' ಶಬ್ದಗಳ ಮುಂದೆ 'ಅ' ಎಂಬ ಸ್ವರವಿದ್ದರೆ ಆ ಸ್ವರ ಹಾಗೇ ಉಳಿಯುತ್ತದೆ. ಇಲ್ಲವೆ ನಡುವೆ 'ನ್' ಆಗಮವಾಗುತ್ತದೆ. 'ವ್ಯಂಜನಾಂತ' ಶಬ್ದದ ಎದುರು 'ಅ' ಎಂಬ ಸ್ವರವಿದ್ದರೆ ಆ ಶಬ್ದರೂಪ ಹಾಗೇ ಉಳಿಯುತ್ತದೆ. (ಮುಕುಂದನ್ ಅವರ); 'ರವರು' ಎಂಬ ಶಬ್ದರೂಪ ಆಡುಭಾಷೆಯಲ್ಲಿ ಇಲ್ಲವೆ ಅನಕ್ಷರಸ್ಥರ ಬಳಕೆಯಲ್ಲಿ ಕ್ವಚಿತ್ತಾಗಿ ಕಂಡುಬರುತ್ತದೆ. ಸುಲಲಿತವಾಗಿ, ನಿರಾತಂಕವಾಗಿ ಹೇಳಲು ಆ ಪದಗಳನ್ನು 'ಶಿವರುದ್ರಪ್ಪ ಅವರು ಇಲ್ಲವೆ ಶಿವರುದ್ರಪ್ಪನವರು' ಎಂದು ಮುಂತಾಗಿ ಬಳಸಬೇಕಾಗುತ್ತದೆ. ಮೇಲೆ ನಿರೂಪಿಸಿದ ಅಸಾಧು ಪ್ರಯೋಗಗಳನ್ನು ವಿದ್ವಾಂಸರು ಬರೆವಣಿಗೆಯಲ್ಲಿ ತರುವುದು ಅನೌಚಿತ್ಯವಾಗುತ್ತದೆ. ಮುಂದಿನ ಜನಾಂಗಕ್ಕೆ ನಾವು 'ದೋಷಪೂರ್ಣ' ಶಬ್ದಗಳ ಬಳುವಳಿಯನ್ನು ಕೊಟ್ಟಂತಾಗುತ್ತದೆ. 'ಗೌರವಸೂಚಕ ಶಬ್ದಗಳನ್ನು' ಹೇಗೆ ಪ್ರಯೋಗಿಸ ಬೇಕೆಂಬುದರ ಪ್ರಜ್ಞೆ 'ಲೇಖಕ ವಿದ್ವಾಂಸರಾದ' ನಮಗೆ ಇರಬೇಕಲ್ಲವೆ?

೨. 'ರಾಜರತ್ನಂರಿಗಿತ್ತು, ಜಿ. ನಾರಾಯಣರ, ಪು.ತಿ.ನ.ರೊಂದಿಗೆ, ರಾಜರತ್ನಂರ, ರಾಜರತ್ನಂರನ್ನು, ಕೈಲಾಸಂರ, ಮಧುಪರು, ಅನಕೃರವರ' ಎಂಬ ಪ್ರಯೋಗಗಳು ಸರಿಯೇ? ಲೇಖನ ಬರೆಯುವ ಆತುರದಲ್ಲಿ, ನಾನು ಬರೆದದ್ದೇ ಸರಿ ಎಂಬ ಧಾಟಿಯಲ್ಲಿ ಇಂಥ ಅಪಪ್ರಯೋಗಗಳ ಬಳಕೆ ಮಕ್ಕಳ ಮೇಲೆ ದುಷ್ಪರಿಣಾಮ ಬೀರುವುದಿಲ್ಲವೆ? ಮೇಲಿನ ಶಬ್ದರೂಪಗಳನ್ನು ಹೀಗೆ ಬರೆಯಬಹುದಿತ್ತಲ್ಲವೇ? ಅದರಿಂದ ಕರ್ಕಶತೆ ನಿವಾರಣೆಯಾಗಿ ಭಾಷಾ ಸೌಮ್ಯತೆ ಪ್ರಾಪ್ತವಾಗುತ್ತಿತ್ತಲ್ಲವೆ? ರಾಜರತ್ನಂ ಅವರಿಗಿತ್ತು, ಜಿ.ನಾರಾಯಣ ಅವರ, ಪು.ತಿ.ನ ಅವರೊಂದಿಗೆ, ರಾಜರತ್ನಂ ಅವರ, ರಾಜರತ್ನಂ ಅವರನ್ನು, ಕೈಲಾಸಂ ಅವರ, ಮಧುಪ ಅವರು ಅನಕೃ ಅವರ.

೩. 'ನಿರ್ದೇಶಕ, ವರ್ಗೀಕರಣ, ದುರ್ಯೋಧನ, ಕಾರ್ತೀಕ, ಸರ್ವೇಸಾಮಾನ್ಯ' ಎಂಬ ಶಬ್ದಗಳನ್ನು 'ನಿರ್ದೇಶಕ, ವರ್ಗೀಕರಣ, ದುರ್ಯೋಧನ, ಕಾರ್ತೀಕ, ಸರ್ವೇಸಾಮಾನ್ಯ'

ಎಂದು ಬಳಸಬೇಕು. 'ದೇ, ಗೀ, ಯೋ, ತೀ, ವೇ' ಎಂಬ ಕಾಗುಣಿತದ ಒಂದು ಘಟಕ ಮುಗಿದ ಮೇಲೆ ಅನ್ಯಾಕ್ಷರವನ್ನು, ಸದ್ಯ ಇಲ್ಲಿ 'ಅರ್ ಕಾರದ ಒತ್ತನ್ನು' ಬಳಸುವುದು ಸಾಧು ರೂಪವಾಗುತ್ತದೆ. 'ನಿರ್‌ದೇಶಕ, ವರ್‌ಗೀಕರಣ, ದುರ್ ಯೋಧನ, ಕಾರ್‌ತೀಕ, ಸರ್‌ವೇ ಸಾಮಾನ್ಯ' ಎಂಬ ಉಚ್ಚಾರ ಕಿವಿಗೆ ಬೀಳುವುದರಿಂದ ಆ ಶಬ್ದರೂಪಗಳನ್ನು ಕಾಗುಣಿತದೋಷ ಸಹಿತ ರೂಪಗಳನ್ನಾಗಿ ಬರೆಯುತ್ತಿದ್ದೇವೆ. ನಿರ್ದೇಶಕ, ವರ್ಗೀಕರಣ, ದುರ್ಯೋಧನ, ಕಾರ್ತೀಕ, ಸರ್ವೇಸಾಮಾನ್ಯ ಎಂದು ಬೇಕಾದರೂ ಬಳಸಬಹುದು.

೪. 'ಮನೆನಲ್ಲಿ, ತಲೆನಲ್ಲಿ, ಸೊಸೈಟಿನಲ್ಲಿ, ಕೈನಲ್ಲಿ, ಆಸ್ಪತ್ರೆನಲ್ಲಿ ಬಾಯಿನ ಮೇಲೆ' ಎಂಬ ಪದರೂಪಗಳನ್ನು ಓದುವಾಗ ಇರಲಿ ವಿದ್ಯಾವಂತರ ಭಾಷಣಗಳ ನ್ನಾಲಿಸುವಾಗ ಎದೆಯನ್ನು ಹಿಂಡಿದಂಥ ಅನುಭವವಾಗುತ್ತದೆ. ಈ ಪ್ರಯೋಗಗಳು ಹೇಗೆ ಬಂದವು? ನನಗೆ ತಿಳಿದಂತೆ ವ್ಯಾಕರಣದ ಅರಿವಿಲ್ಲದ ಹಳ್ಳಿಗರೂ ಅನಕ್ಷರಸ್ಥರೂ ಇಂಥ ಅಪಪ್ರಯೋಗಗಳನ್ನು ಬಳಸುವುದಿಲ್ಲ. ಘನ ವಿದ್ವಾಂಸರಾದ ನಾವು 'ಮನೆಯಲ್ಲಿ, ತಲೆಯಲ್ಲಿ, ಸೊಸೈಟಿಯಲ್ಲಿ, ಕೈಯಲ್ಲಿ, ಆಸ್ಪತ್ರೆಯಲ್ಲಿ, ಬಾಯಿಯಮೇಲೆ ಎಂಬ 'ನ' ಕಾರರಹಿತ 'ಯ' ಕಾರಸಹಿತವಾದ ಸಾಧುರೂಪಗಳನ್ನು ಬಳಸಿದರೆ ಎಷ್ಟು ಸಂತೋಷವಾಗುತ್ತದೆ, ಭಾಷಾ ಸೌಮ್ಯತೆ ಮೂಡಿ ಕರ್ಕಶತೆ ತೊಲಗುತ್ತದೆಯಲ್ಲವೆ? 'ಗ್ರಾಂಥಿಕ ಭಾಷೆಯ ಜ್ಞಾನ' ನಮಗಿರಬೇಕಾಗುತ್ತದೆ ಎಂದು ಹೇಳಿದರೆ ಯಾರೂ ತಪ್ಪಾಗಿ ಭಾವಿಸಬಾರದು.

೫. 'ಅದರಂತ, ಎಂತ, ಇಂತ, ಇದರಂತ' ಎಂಬ ಶಬ್ದಗಳನ್ನೂ ಮಹಾಪ್ರಾಣಾಕ್ಷರಗಳನ್ನೂ ಒಳಗೊಂಡಂತೆ ಎರಡು ರೀತಿಗಳಲ್ಲಿ ಬರೆಯಬಹುದು; ಅದೇ ಸರಿ: 'ಅದರಂಥ – ಅದರಂತಹ', 'ಎಂಥ–ಎಂತಹ', 'ಇಂಥ–ಇಂತಹ', 'ಇದರಂಥ–ಇದರಂತಹ'. ಅಲ್ಪಪ್ರಣಾಕ್ಷರಗಳನ್ನು ಬಳಸುವುದರಿಂದ ಅನ್ಯಾರ್ಥ, ಅಪಾರ್ಥಗಳೂ ಬರುವ ಸಾಧ್ಯತೆಗಳಿವೆ ಎಂಬುದನ್ನು– 'ಅದರಂತ, ಇದರಂತ' ಎಂಬ ಶಬ್ದಗಳ ಬಳಕೆಯಿಂದ ಅರಿಯಬಹುದು.

೬. 'ಮೊನು–ಮಾನು', 'ಮೊಮಾಂಸೆ–ಮಾಮಾಂಸೆ', ಮೊರಿ–ಮಾರಿ, ಮಾಮೂಲು–ಮಾಮೂಲು' ಎಂಬ ಶಬ್ದಗಳ ಪ್ರಯೋಗಗಳನ್ನು ಗಮನಿಸಿದರೆ ನಮಗೆ ಕಾಗುಣಿತವೇ ಗೊತ್ತಿಲ್ಲವೇನೋ ಎನಿಸಿಬಿಡುವ ಸಾಧ್ಯತೆಗಳಿರುತ್ತವೆ. 'ಮೊನು' ಎಂಬ ಶಬ್ದದ 'ಮೊ' ನಲ್ಲಿರುವ ದೀರ್ಘ 'ಊ' (ೂ), 'ಮಾ'ನಲ್ಲಿರುವ ದೀರ್ಘ 'ಆ' ( ಾ ). ಆದರೆ ಅಲ್ಲಿರಬೇಕಾದ ದೀರ್ಘ 'ಈ'(ೀ). ಆದ್ದರಿಂದ ಈ ಶಬ್ದ 'ಮೀನು' ಎಂದಿರಬೇಕು. ಇದರಂತೆಯೇ 'ಮೀಮಾಂಸೆ, ಮೀರಿ, ಮಾಮೂಲು' ಎಂಬ ಶಬ್ದರೂಪಗಳು. ಕಾಗುಣಿತದ ಘಟಕವನ್ನೇ ಗಮನಸದ ನಾವು ಇಂಥ ಎಷ್ಟೋ ಶಬ್ದಗಳನ್ನು ಬಳಸುತ್ತಿದ್ದೇವೆ. ಕಾಗುಣಿತ ಕಲಿಯುವ ಮಕ್ಕಳಿಗೆ, ಕಲಿಸುವ ಅಧ್ಯಾಪಕ ಮಿತ್ರರಿಗೆ, ಬರೆಯುವ ಲೇಖಕ ಮಿತ್ರರಿಗೆ ಸ್ವಲ್ಪ ತಿಳಿವಳಿಕೆಯಿದ್ದರೆ ಸಾಕು, ಇಂಥ ಅಪಪ್ರಯೋಗಗಳನ್ನು ತಿರಸ್ಕರಿಸಬಹುದು. ಕೂ, ಕೊ, ಕೋ, ಝೊ, ಲೊ, ಯೊ,

ಯೊ, ಯಾ ಎಂಬಕ್ಷರಗಳ ಸರಿಯಾದ ರೂಪಗಳು ಕೂ, ಕೊ, ಕೋ; ಝೂ, ಮೊ, ಯಾ, ಯೊ, ಯೂ.

೭. ಯೂರೋಪಿಯನ್ ಸಾಹಿತ್ಯಪ್ರಿಯ ಅಧ್ಯಾಪಕರಿಂದು ಹಳಗನ್ನಡ ವ್ಯಾಕರಣಾಧ್ಯಯನವನ್ನು ಸ್ನಾತಕ – ಸ್ನಾತಕೋತ್ತರ ತರಗತಿಗಳಿಂದ ಕಿತ್ತು ಹಾಕಿಸಿದ್ದಾರೆ! ಇದು ಎಷ್ಟರ ಮಟ್ಟಿಗೆ ಸರಿ? ಹಳಗನ್ನಡಭಾಷೆಯನ್ನು ಕುರಿತು ಹಳಗನ್ನಡದಲ್ಲಿಯೇ ರಚಿತವಾಗಿರುವ ಕೇಶಿರಾಜನ 'ಶಬ್ದಮಣಿ ದರ್ಪಣ'ವನ್ನೋದದ ವಿದ್ಯಾರ್ಥಿಮಿತ್ರರು ಹಳಗನ್ನಡ ಕೃತಿಗಳನ್ನೋದಿ ಅರ್ಥಮಾಡಿಕೊಳ್ಳುವುದು ಹೇಗೆ? ವ್ಯಾಕರಣ ಪ್ರಕ್ರಿಯೆಗಳನ್ನು ತಿಳಿದುಕೊಳ್ಳುವುದಾದರೂ ಹೇಗೆ? ಅಕ್ಷರ, ಶಬ್ದ, ಸಂಧಿ, ಸಮಾಸ, ಅವ್ಯಯ, ನಾಮಪದ, ನಾಮವಿಭಕ್ತಿ ಪ್ರತ್ಯಯಗಳು, ಆಖ್ಯಾತ ಪ್ರತ್ಯಯಗಳು, ತದ್ಧಿತ ರೂಪಗಳು ಅವರಿಗೆ ತಿಳಿಯಬೇಡವೆ? 'ಱ' 'ೞ'ಗಳ ವಿಚಾರ ಅವರಿಗೆ ಗೊತ್ತಾಗಬಾರದೆ? ಇಂದು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಯೂರೋಪಿಯನ್ ಸಾಹಿತ್ಯದ ಬಗ್ಗೆ ಅಲ್ಪಸ್ವಲ್ಪ ತಿಳಿವಳಿಕೆ ಇರುತ್ತದೆ. ಆದರೆ ಪ್ರಾಚೀನ ಹಾಗೂ ಅರ್ವಾಚೀನ ಕನ್ನಡ ಸಾಹಿತ್ಯದ ಬಗ್ಗೆ ಏನು ಗೊತ್ತಿರುತ್ತದೆಯೋ ದೇವರೇ ಬಲ್ಲ! 'ಪಂಪರಾಮಾಯಣ' ಎಂಬ ಕೃತಿಯ ಕರ್ತೃ ಯಾರು? ಆ ಕೃತಿಗೆ ಆ ಹೆಸರು ಬರಲು ಕಾರಣವೇನು? ಆ ಕವಿಯ ಕಾಲ ಯಾವುದು? ಅದು ಯಾವ ಛಂದೋರೂಪದಲ್ಲಿ ರಚನೆಯಾಗಿದೆ?' ಎಂದು ಸಂದರ್ಶನವೊಂದರಲ್ಲಿ ಒಬ್ಬ ಎಂ.ಎ., ಪದವೀಧರರನ್ನು ಕೇಳಿದಾಗ ಅವರು ಹೀಗೆ ಉತ್ತರಿಸಿದರು: 'ಆ ಕೃತಿಯ ಕರ್ತೃ ಪಂಪ. ಅದನ್ನು ಪಂಪ ಬರೆದದ್ದರಿಂದ ಆ ಕೃತಿಗೆ ಪಂಪರಾಮಾಯಣ ಎಂಬ ಹೆಸರು ಬಂದಿತು. ಆ ಕವಿಯ ಕಾಲ ಒಂಬತ್ತನೆಯ ಶತಮಾನ. ಅದು ಕಾದಂಬರಿ ಛಂದಸ್ಸಿನಲ್ಲಿದೆ'. ಈ ಉತ್ತರದಿಂದ ನನಗೆ ನಗುವೂ ಬರಲಿಲ್ಲ; ಅಳುವೂ ಬರಲಿಲ್ಲ; ಆಶ್ಚರ್ಯವಾಯಿತು.

೮. 'ಎಂ.ಎ', ಪದವಿ ಪಡೆದು, ಸಂಶೋಧನೆ ಮಾಡಿ 'ಪಿಎಚ್.ಡಿ' ಪಡೆದ ಪದವೀಧರರು ಆ ಶಬ್ದರೂಪವನ್ನು ತಮ್ಮ ಹೆಸರಿನ ಮುಂದೆ 'ಎಂ.ಎ.ಪಿ.ಎಚ್.ಡಿ' ('ಎಂ.ಎಸ್.ಸಿ.ಪಿ.ಹೆಚ್.ಡಿ' ಎಂದೂ ತಮ್ಮ ಹೆಸರಿನ ಮುಂದೆ ಪದವಿಗಳನ್ನು ನಮೂದಿಸಿಕೊಂಡವರಿದ್ದಾರೆ) ಎಂದು ನಮೂದಿಸಿಕೊಂಡರೆ ಏನೆನ್ನಬೇಕು? 'ಎಂ.ಎ'; ಆದ ಮೇಲೆ ಅರ್ಧವಿರಾಮ ಚಿಹ್ನೆ, 'ಪಿಎಚ್'('ಫಿಲಾಸಫಿ' ಎಂಬುದು ಒಂದು ಶಬ್ದ, ಅದರ ಆದ್ಯಕ್ಷರಗಳು 'ಪಿಎಚ್') ಆದ ಮೇಲೆ ಒಂದು ಪೂರ್ಣ ವಿರಾಮ ಚಿಹ್ನೆ, ಅನಂತರ 'ಡಿ' ಎಂಬ ಅಕ್ಷರವನ್ನು ನಮೂದಿಸಬೇಕೆಂಬ' ಸಾಮಾನ್ಯ ಜ್ಞಾನ ಇರಬೇಡವೆ?

೯. ಅನಗತ್ಯ ಒತ್ತುಗಳನ್ನು ಕೊಟ್ಟು, ಎರಡೆರಡು ಬಹುವಚನ ಪ್ರತ್ಯಯಗಳನ್ನು ಬಳಸಿ ಕೆಲವು ಶಬ್ದಗಳನ್ನು ಬರೆಯುತ್ತಿದ್ದೇವೆ. ಅದರ ಅಗತ್ಯವಿಲ್ಲವೆಂಬುದನ್ನು ಗಮನಿಸಬೇಕು:

'ಮಕ್ಕಳುಗಳನ್ನು, ಅವುಗಳನ್ನು, ಇವುಗಳನ್ನು ಅಂಥವುಗಳನ್ನು' ಇತ್ಯಾದಿ. ಈ ಶಬ್ದರೂಪಗಳನ್ನು 'ಮಕ್ಕಳನ್ನು, ಅವನ್ನು, ಇವನ್ನು ಅಂಥವನ್ನು' ಎಂದು ಬರೆದರೆ, ಸಾಕಲ್ಲವೆ?

೧೦. ಕನ್ನಡ ವರ್ಣಮಾಲೆಗೆ ಸಂಸ್ಕೃತದಿಂದ ಋ, ೠ, ಶ, ಷಃ, ಹತ್ತು ಮಹಾಪ್ರಾಣಾಕ್ಷರಗಳನ್ನು ಸ್ವೀಕರಿಸಿ ಸೇರಿಸಿಕೊಂಡಂತೆ ಅರೇಬಿಕ್ ಹಾಗೂ ಇಂಗ್ಲಿಷ್ ವರ್ಣಮಾಲೆಯ ಪ್ರೇರಣೆಯಿಂದ 'ಫ಼' (F), 'ಜ಼' (Z), 'ಖ಼' (Kha) ಎಂಬ ಮಹಾಪ್ರಾಣಾಕ್ಷರಗಳನ್ನು ಕನ್ನಡ ವರ್ಣಮಾಲೆಗೆ ಸೇರಿಸಿಕೊಳ್ಳಬೇಕಾಗುತ್ತದೆ: 'ಫ಼ೈಸಲ್ ಫ಼ೀ, ಕಾಫ಼ಿ, ಪ್ರೊಫ಼ೆಸರ್, ಫ಼ೂಲ್; ಹುಜ಼ೂರ್ ಟ್ರೆಜ಼ರಿ, ಬಜ಼ಾರ್, ಬಜ಼ಾರಿ, ಜ಼ೂ, ಜ಼ೆರಾಕ್ಸ್; ಖ಼ಲಂದರ್, ಫ಼ೈಜ಼ುನ್, ಖ಼ಾವಿಂದ್, ಖ಼ುಷ್‌ಬೂ' ಎಂಜಿವೇ ಮುಂತಾದ ಶಬ್ದಗಳನ್ನು ನಾವು ದಿನನಿತ್ಯ ಬಳಸುತ್ತಿದ್ದೇವೆ. ಅವನ್ನು ಫೈಸಲ್, ಫೀ, ಕಾಫಿ ಎಂದು ಮುಂತಾಗಿ ಬರೆದರೆ, ಉಚ್ಚರಿಸಿದರೆ ನಗೆಪಾಟಲಿಗೆ ಈಡಾಗಬೇಕಾಗುತ್ತದೆ.

೧೧. ಸಾಮಾನ್ಯವಾದ ಕೆಲವು ಶಬ್ದಗಳನ್ನು ಸೋಮಾರಿತನದಿಂದಲೋ ಅಜ್ಞಾನದಿಂದಲೋ ತಪ್ಪು ತಿಳಿವಳಿಕೆಯಿಂದಲೋ ಹೇಗೆ ತಪ್ಪು ತಪ್ಪಾಗಿ ಬರೆಯುತ್ತಿದ್ದೇವೆ ಎಂಬುದನ್ನು ಗಮನಿಸೋಣ. (ತಪ್ಪಾದ ರೂಪವನ್ನು ಮೊದಲು ಕೊಟ್ಟಿದೆ, ಸರಿಯಾದ ರೂಪವನ್ನು ಆಮೇಲೆ ಕೊಟ್ಟಿದೆ): ಕರಾರುವಕ್ಕು–ಕರಾರುವಾಕ್ಕು, ಬರಸು–ಬರೆಸು, ಭೇಧ–ಭೇದ, ಮೌಢ್ಯತನ–ಮೌಢ್ಯ (ಮೂಢತನ), ಪಾಶ್ಚಾತ್ಯ–ಪಾಶ್ಚಿಮಾತ್ಯ, ಸಂಮ್ಮಿಳಿತ (ಸಂಮಿಳಿತ)–ಸಮ್ಮಿಳಿತ, ಕವಯತ್ರಿ (ಕವಿಯತ್ರಿ), ಕವಯಿತ್ರಿ)–ಕವಿಯಿತ್ರಿ, ಅನಾವಶ್ಯಕ–ಅನವಶ್ಯಕ, ಅನಾನುಕೂಲ–ಅನನುಕೂಲ, ಬರಹ–ಬರೆಹ, ಬೆಳವಣಿಗೆ–ಬೆಳೆವಣಿಗೆ, ನಡವಳಿಕೆ–ನಡೆವಳಿಕೆ, ಕೂಲಂಕುಶ – ಕೂಲಂಕಷ, ತತ್ವ – ತತ್ತ್ವ (ಜೊತೆ pair ಎಂಬ ಅರ್ಥ, ಜತೆ – with ಎಂಬ ಅರ್ಥ; ಸ್ವರಾಂತಶಬ್ದದ ಮುಂದೆ ನಂತರ, ಇತರ ಕಡೆ 'ಅನಂತರ' ಶಬ್ದ ಬಳಕೆ), ತಾತ್ವಿಕ–ತಾತ್ತ್ವಿಕ, ಕಾಲಾಂತರದಲ್ಲಿ–ಕಾಲಾನಂತರದಲ್ಲಿ, ಬೆಳಸಲು–ಬೆಳೆಸಲು, ಒಂಭತ್ತು–ಒಂಬತ್ತು, ಸ್ತುತ್ಯಾರ್ಹ–ಸ್ತುತ್ಯರ್ಹ, ತ್ರೊಂಭತ್ತು–ತೊಂಬತ್ತು, ಪೂರ್ವವಿಕರ–ಪೂರ್ವಿಕರ, ವೈಶಿಷ್ಟ್ಯತೆ–ವಿಶಿಷ್ಟತೆ(ವೈಶಿಷ್ಟ್ಯ), ತಿಳುವಳಿಕ–ತಿಳಿವಳಿಕೆ, ಮುಂದುವರೆಸು–ಮುಂದುವರಿಸು, ದುರಾಭ್ಯಾಸ–ದುರಭ್ಯಾಸ, ಪ್ರಾಮುಖ್ಯತೆ–ಪ್ರಮುಖತೆ (ಪ್ರಾಮುಖ್ಯ), ಅಧೀನತ್ವಕ್ಕೆ–ಅಧೀನಕ್ಕೆ, ಮೆರವಣಿಗೆ–ಮೆರೆವಣಿಗೆ, ಯವ್ವನ(ಯೌವ್ವನ)–ಯೌವನ, ಪ್ರಸ್ಥಾಪಿಸು–ಪ್ರಸ್ತಾಪಿಸು, ಹಿನ್ನಲೆ–ಹಿನ್ನೆಲೆ, ಕೋಟ್ಯಾಂತರ–ಕೊಟ್ಯಂತರ, ಪಾತಿವೃತ್ಯ–ಪಾತಿವ್ರತ್ಯ, ಕೃರ–ಕ್ರೂರ, ಗ್ರಹಿಣಿ–ಗೃಹಿಣಿ, ದುರಾದೃಷ್ಟ–ದುರದೃಷ್ಟ, ಪೂರ್ವಾಗ್ರಹಪೀಡಿತ–ಪೂರ್ವಗ್ರಹಪೀಡಿತ, ಅಧ್ಯಾತ್ಮಿಕ – ಆಧ್ಯಾತ್ಮಿಕ, ಜಾಗ್ರತ–ಜಾಗೃತ, ಜಾತ್ಯಾತೀತ–ಜಾತ್ಯತೀತ, ಕೋಟ್ಯಾನುಕೋಟಿ–ಕೋಟ್ಯನುಕೋಟಿ, ಸ್ಪರ್ಷ–ಸ್ಪರ್ಶ, ಹರಿಶಿಣ–ಅರಿಷಿಣ, ಬೆಳಿಗ್ಗೆ–ಬೆಳಗ್ಗೆ, ಚಿನ್ಹೆ–ಚಿಹ್ನೆ ಇತ್ಯಾದಿ. ಇತ್ತೀಚಿನ ಬರೆವಣಿಗೆಗಳಲ್ಲಿ (ವಿದ್ಯಾರ್ಥಿಗಳ, ಅಧ್ಯಾಪಕರ, ಸಾಹಿತಿಗಳ ಬರೆವಣಿಗೆಗಳಲ್ಲಿ) ನಾನು ಗಮನಿಸಿದ ಕೆಲವು ಲೋಪದೋಷಗಳನ್ನು ಮಾತ್ರ ಇಲ್ಲಿ ಕೊಟ್ಟಿದ್ದೇನೆ. ವಿದ್ವಾಂಸರಾದ ನಾವು ಶಬ್ದಗಳನ್ನು ಎಚ್ಚರಿಕೆಯಿಂದ ಬಳಸಬೇಕು ಎಂಬುದು ನನ್ನ ಕಳಕಳಿಯ ಮನವಿ.

೧೨. ಇನ್ನು ವಾಕ್ಯರಚನೆಯ ಬಗ್ಗೆ ಸ್ವಲ್ಪ ಗಮನ ಹರಿಸೋಣ:

೧. "ಆ ಕೊಳಗಳಲ್ಲಿ ತಾವರೆ ಹೂಗಳು ಅರಳಿ ನಿಂತಿತ್ತು"
೨. "ಗಾಂಧಾರಿಗೂ ಈ ವಿಚಾರಗಳೆಲ್ಲ ತಿಳಿದಿತ್ತು"
೩. "ಆತನಿಗೆ ಕುಶಲವಿದ್ಯೆಗಳು ತಿಳಿದಿತ್ತು, ಬರುತ್ತಿತ್ತು"
೪. "ಆಯುಧಗಳೆಲ್ಲವೂ ಭದ್ರವಾಗಿರುತ್ತದೆ"
೫. "ನಾನಾ ಬಗೆಯ ಹಕ್ಕಿಗಳು ಚಿಲಿ ಪಿಲಿ ಶಬ್ದಮಾಡುತ್ತಿತ್ತು"
೬. "ಎಲ್ಲವೂ ತಿಳಿದೂ ನೀನು ಹೀಗೆ ದುಃಖಪಡುತ್ತ ಕೂರುವುದರಿಂದ ನೀನು ಕರ್ತವ್ಯಭ್ರಷ್ಟನಾಗುವುದೊಂದು ಬಿಟ್ಟು ಮತ್ತೇನನ್ನೂ ಸಾಧಿಸಲಾರೆ"
೭. "ಗೆದ್ದೇಗೆಲ್ಲುತ್ತೇವೆ ಎಂದು ಹೇಳುವ ಸ್ಥಿತಿಯಲ್ಲಿ ಯಾರೂ ನಾಯಕರೂ ಇಲ್ಲ".
೮. "ಭಾಷೆಯನ್ನು ಮನುಷ್ಯ ಜಾತಿ ವಿಶಿಷ್ಟ ಲಕ್ಷಣವನ್ನಾಗಿ ಗುರುತಿಸಲಾಗುತ್ತದೆ"

ಮೇಲಿನ ವಾಕ್ಯಗಳಲ್ಲಿ ವಚನದೋಷಗಳಿವೆ; ಗ್ರಾಂಥಿಕ ಭಾಷೆಯೊಳಗೆ ಆಡು ಭಾಷೆ ನುಸುಳಿದೆ; ವಿರಾಮ ಚಿಹ್ನೆಗಳ ಬಳಕೆಯಿಲ್ಲ; ಮೇಲಿನ ವಾಕ್ಯಗಳ ಸರಿಯಾದ ರೂಪಗಳು ಹೀಗಿವೆ.

೧. "ಆ ಕೊಳಗಳ ತಾವರೆಯ ಹೂಗಳು ಅರಳಿ ನಿಂತಿದ್ದವು"
೨. "ಗಾಂಧಾರಿಗೆ ಈ ವಿಚಾರಗಳೆಲ್ಲವೂ ತಿಳಿದಿದ್ದವು" ಇಲ್ಲವೆ "ಗಾಂಧಾರಿಗೂ ಈ ವಿಚಾರಗಳು ತಿಳಿದಿದ್ದವು'.
೩. "ಆತನಿಗೆ ಕುಶಲವಿದ್ಯೆಗಳು ತಿಳಿದಿದ್ದವು, ಬರುತ್ತಿದ್ದವು"
೪. "ಆಯುಧಗಳೆಲ್ಲವೂ ಭದ್ರವಾಗಿರುತ್ತವೆ"
೫. "ನಾನಾ ಬಗೆಯ ಹಕ್ಕಿಗಳು ಚಿಲಿ ಪಿಲಿ ಶಬ್ದ ಮಾಡುತ್ತಿದ್ದವು"
೬. "ಎಲ್ಲವನ್ನೂ ತಿಳಿದ ನೀನು, ಹೀಗೆ ದುಃಖಪಡುತ್ತ ಕುಳಿತು ಕೊಳ್ಳುವುದರಿಂದ, ನೀನು ಕರ್ತವ್ಯ ಭ್ರಷ್ಟನಾಗುವುದೊಂದನ್ನು ಬಿಟ್ಟು ಮತ್ತೇನನ್ನೂ ಸಾಧಿಸಲಾರೆ". (ಉಚಿತವಾದ ಕಡೆ ಲೇಖನ ಚಿಹ್ನೆಗಳು ಬಂದಿರುವುದನ್ನು ಓದುಗಮಿತ್ರರು ಗಮನಿಸಬೇಕು).
೭. 'ಗೆದ್ದೇ ಗೆಲ್ಲುತ್ತೇವೆ' ಎಂದು ಹೇಳುವ ಸ್ಥಿತಿಯಲ್ಲಿ ಯಾವ ನಾಯಕರೂ ಇಲ್ಲ.
೮. ಮನುಷ್ಯ ಜಾತಿ ಭಾಷೆಯನ್ನು ವಿಶಿಷ್ಟ ಲಕ್ಷಣವನ್ನಾಗಿ ಗುರುತಿಸುತ್ತದೆ.

ವಾಕ್ಯರಚನೆಯಲ್ಲಿ ಗೊಂದಲ, ಅಸ್ಪಷ್ಟತೆ, ಅರಾಜಕತೆ, ಎಲ್ಲವನ್ನೂ ಒಂದೇ ವಾಕ್ಯದಲ್ಲಿ ಹೇಳಿಬಿಡಬೇಕೆಂಬ ಉತ್ಸಾಹ ಕೆಲವು ಕಡೆ ಕಂಡುಬರುತ್ತದೆ. ಮೂರು ಉದಾಹರಣೆಗಳನ್ನು ನೋಡೋಣ:

೧. **"ಗಂಗಾದೇವಿ(೧೩೫೬-೧೩೭೭)"**: ಸಂಗಮ ವಂಶದ ಬುಕ್ಕರಾಯನ ಮಗನಾದ ಕಂಪಣನ ಹೆಂಡತಿಯಾದ ಈಕೆಯು ಮಧುರಾವಿಜಯಂ ಅಥವಾ ವೀರ ಕಂಪಣರಾಯ ಚರಿತ ಎಂಬ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಚಾರಿತ್ರಿಕ ಧ್ವನಿಯುಳ್ಳ ಕಾವ್ಯವನ್ನು ಚಂಪೂಮಾದರಿಯಲ್ಲಿ ಸಂಸ್ಕೃತದಲ್ಲಿ ರಚಿಸಿದ್ದಾಳೆ".

ಮೇಲಿನ ವಾಕ್ಯವನ್ನು ಹೀಗೆ ಬರೆಯಬಹುದಿತ್ತಲ್ಲವೆ?

"ಗಂಗಾದೇವಿ (೧೩೫೬-೧೩೭೭): ಬುಕ್ಕರಾಯ ಸಂಗಮ ವಂಶದವನು. ಈತನ ಮಗ ಕಂಪಣ. ಕಂಪಣನ ಹೆಂಡತಿ ಗಂಗಾದೇವಿ. ಈಕೆ 'ಮಧುರಾವಿಜಯಂ' ಅಥವಾ 'ವೀರಕಂಪಣರಾಯ ಚರಿತಂ' ಎಂಬ ಚಂಪೂಕಾವ್ಯವನ್ನು ರಚಿಸಿದ್ದಾಳೆ. ಇದು ಸಂಸ್ಕೃತದಲ್ಲಿದೆ. ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಈ ಕೃತಿ ಚಾರಿತ್ರಿಕ ಧ್ವನಿಯನ್ನು ಒಳಗೊಂಡಿದೆ". (ಅಗತ್ಯವಾದ ಕಡೆ ವಿರಾಮಚಿಹ್ನೆಗಳನ್ನು ಬಳಸಿರುವುದನ್ನು ಗಮನಿಸಿ).

೨. ಈ ಕೃತಿಯಲ್ಲಿ ಸ್ಥಳನಾಮಗಳ ವರ್ಗೀಕರಣ ಅತ್ಯಂತ ವೈಜ್ಞಾನಿಕ ನಿಷ್ಠವಾಗಿದ್ದು, ಭಟ್ಟರು ವರ್ಗೀಕರಣದ ಒಂದೊಂದು ಭಾಗವನ್ನು ಬೇರೆ ಬೇರೆ ಅಧ್ಯಾಯದಲ್ಲಿ ವಿಶ್ಲೇಷಿಸುತ್ತಾರೆ.

ಮೇಲಿನ ವಾಕ್ಯದ ಸರಿಯಾದ ರೂಪವನ್ನು ಗಮನಿಸಿ:

"ಈ ಕೃತಿಯಲ್ಲಿ ಸ್ಥಳನಾಮಗಳ ವರ್ಗೀಕರಣ ಅತ್ಯಂತ ವೈಜ್ಞಾನಿಕವಾಗಿದ್ದು (ವಿಜ್ಞಾನ ನಿಷ್ಠವಾಗಿದ್ದು), ಭಟ್ಟರು ವರ್ಗೀಕರಣದ ಒಂದೊಂದು ಭಾಗವನ್ನು ಬೇರೆ ಬೇರೆ ಅಧ್ಯಾಯಗಳಲ್ಲಿ ವಿಶ್ಲೇಷಿಸಿದ್ದಾರೆ."

೩. "ಆದರೆ ಬಸವಣ್ಣನನ್ನು ಅಧಿಕಾರದಿಂದ ವಿಮುಕ್ತಿಗೊಳಿಸಲು ಬಿಜ್ಜಳನಿಗೆ ಇಷ್ಟವಿಲ್ಲ. ಅದಕ್ಕಿಂತಲೂ ಅವನು ಬಸವ ಕೇಂದ್ರದಲ್ಲಿ ಸುತ್ತುವ ಅಯಸ್ಕಾಂತದ ಹಾಗೆ, "ನೀವಿಲ್ಲದೆ ನನಗೆ ಬದುಕಿಲ್ಲ" ಎನ್ನುವ ಬಿಜ್ಜಳ ಬಸವಣ್ಣನನ್ನು ತಾನು ಎಂಥೆಂಥ ಸಂದರ್ಭಗಳಲ್ಲಿ ಸಹಿಸಿಕೊಂಡಿದ್ದೇನೆ ಎಂಬುದನ್ನು ಹೇಳುತ್ತಾನೆ. ತಾನೆಷ್ಟು ಬಸವನಿಗೆ ಅಡಿಕ್ಟ್ ಆಗಿದ್ದೇನೆ ಎನ್ನುವುದನ್ನು ತಿಳಿಸುತ್ತಾ "ದೇವಸ್ಥಾನದ ಒಳಗೆ ಕಾಲಿಡದ, ಶರಣರಲ್ಲದವರ ಮನೆಯತ್ತ ತಿರುಗಿ ಕೂಡಾ ನೋಡದ, ಬಿದ್ದ ಬಸದಿಗಳನ್ನು ಕಟ್ಟಿಸದ ಬಸವಣ್ಣನ ವಿರುದ್ಧ ತಾನು ಚಕಾರ ಎತ್ತಲಿಲ್ಲವೆಂದು ಬಸವಣ್ಣನನ್ನು ತನ್ನತ್ತ ಒಲಿಸಿಕೊಳ್ಳಲೆಳೆಸುವ ಬಿಜ್ಜಳ "ನೀವು ಇಲ್ಲಿಂದ ಹೋದ್ರೆ ಸಹಸ್ರಾರು ಶರಣರು ತಬ್ಬಲಿ ಆಗ್ತಾರೆ; ಎನ್ನುವ ಬಿಜ್ಜಳ ಕೊಡುವ ಕಾರಣದಿಂದ ಬಸವಣ್ಣ ಬಿಜ್ಜಳನ ಬೊಕ್ಕಸದಿಂದ ಶರಣರನ್ನು ಸಾಕುತ್ತಿದ್ದ, ಶರಣರು ಅನಾಥವಾಗಲಿರುವ ಕಾರಣದಿಂದಾದರೂ ಬಸವಣ್ಣ ತನ್ನೊಡನೆ ತನ್ನ ಅಧಿಕಾರದಲ್ಲಿ ಉಳಿಯಬೇಕೆಂಬ ಬಿಜ್ಜಳನ ಮಾತು ಬಸವಣ್ಣನ ಮೇಲಿರುವ ಆರೋಪದ ನೆಪದಿಂದ ಚುಚ್ಚುವಂತಹ ಮಾತನ್ನು ಆಡುತ್ತಾನೆ".

ಮೇಲಿನ ವಿಮರ್ಶಾ ಗದ್ಯ ಭಾಗದಲ್ಲಿ ಯಾವ ಯಾವ ವಿರಾಮ ಚಿಹ್ನೆಗಳು (ಉದ್ಧರಣ ಚಿಹ್ನೆಗಳು) ಎಲ್ಲೆಲ್ಲಿ ಬರಬೇಕು; ಪುರುಷವಾಚಕ ಸರ್ವನಾಮಗಳು ಎಲ್ಲೆಲ್ಲಿ, ಹೇಗೆ ಬರಬೇಕು; ಎಲ್ಲಿ ಏಕವಚನ ಶಬ್ದರೂಪಗಳು ಬರಬೇಕು, ಎಲ್ಲಿ ಬಹುವಚನ ಶಬ್ದರೂಪಗಳು ಬರಬೇಕು; ಗ್ರಾಂಥಿಕ ಭಾಷೆಯ ನಿರೂಪಣೆಯಲ್ಲಿ ಆಡುಭಾಷೆ ಏಕೆ ನುಸುಳುತ್ತದೆ; ಕ್ರಿಯಾಪದಗಳ ಬಳಕೆ ಹೇಗಿರಬೇಕಿತ್ತು; ವಾಕ್ಯಗಳು ಎಲ್ಲೆಲ್ಲಿ ನಿಲ್ಲಬೇಕಾಗಿದ್ದವು ಎಂಬುದನ್ನು ತಿದ್ದಿ ತೋರಿಸುವುದಕ್ಕಿಂತ ಅಂಥದೊಂದು ವಿಮರ್ಶಾ ಗದ್ಯ ಭಾಗವನ್ನು ಸ್ಪಷ್ಟವಾಗಿ, ತಿಳಿಯಾದ ಭಾಷೆಯಲ್ಲಿ ಗೊಂದಲರಹಿತವಾಗಿ, ಪ್ರತ್ಯೇಕವಾಗಿ ಬರೆದು ತೋರಿಸಿಬಿಡುವುದು ಒಳ್ಳೆಯದು. ಈ ಕಾರ್ಯವನ್ನು ಈ ವಿಮರ್ಶಾಗದ್ಯವನ್ನು ಬರೆದವರಿಗೇ ವಹಿಸುವುದು ಒಳ್ಳೆಯದೆಂದು ತೋರುತ್ತದೆ.

'ಶ್ರಮಜೀವಿಗಳ, ಕಷ್ಟ ಜೀವಿಗಳ' ಇಲ್ಲಿ ಒಂದೇ ಅರ್ಥದ ಎರಡು ಶಬ್ದಗಳ ಬಳಕೆ ಬೇಕಾಗಿತ್ತೆ? 'ಅರಕಲಗೂಡು ನರಸಿಂಗರಾಯರು ಮತ್ತು ತಾಯಿ ಅನ್ನಪೂರ್ಣಮ್ಮನವರ ಮಗನಾದ ಕೃಷ್ಣರಾಯರು ಜನಿಸಿದ್ದು'......... ಈ ವಾಕ್ಯದಲ್ಲಿ ತಾಯಿ ಎಂಬ ಪದದ ಅಗತ್ಯವಿತ್ತೆ? 'ಅರಕಲಗೂಡು ನರಸಿಂಗರಾಯರು ಮತ್ತು ಅನ್ನಪೂರ್ಣಮ್ಮನವರ ಮಗನಾದ ಕೃಷ್ಣರಾಯರು ಜನಿಸಿದ್ದು' .........ಎಂದಿರಬೇಕಿತ್ತಲವೆ?

ಮೇಲಿನ ವಾಕ್ಯಗಳಲ್ಲಿ ಎಂತೆಂತಹ ದೋಷಗಳಿವೆ ಎಂಬುದನ್ನು ಸಹೃದಯರು ಪರಿಭಾವಿಸಬೇಕು. ಲೇಖಕರು (ಅಧ್ಯಾಪಕರು) ಯಾವುದೇ ವಿಚಾರವನ್ನು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ, ಅರ್ಥಸಂದಿಗ್ಧತೆಗೆ ಅವಕಾಶವಿಲ್ಲದಂತೆ ತಿಳಿಯಾದ ಭಾಷೆಯಲ್ಲಿ ಹೇಳಲು ಪ್ರಯತ್ನಿಸದಿದ್ದರೆ ಎಂತಹ ಮಹಾಪರಾಧಗಳಾಗುತ್ತವೆ ಎಂಬುದಕ್ಕೆ ಮೇಲಿನ ವಾಕ್ಯಗಳೇ ಉತ್ತಮ ಉದಾಹರಣೆಗಳಾಗುತ್ತವೆ. ಲೇಖನ(ಕೃತಿ) ಬರೆದಾದ ಮೇಲೆ ಶಾಂತಚಿತ್ತದಿಂದ ಪರಿಶೀಲಿಸಿ ಆಮೇಲೆ ಮುದ್ರಣಕ್ಕೆ ಕಳುಹಿಸುವುದು ಒಳ್ಳೆಯದು. ಈ ಹಿನ್ನೆಲೆಯಲ್ಲಿ ಸಾಹಿತಿಗಳೂ ಆಗಿರುವ ಶಾಲಾ-ಕಾಲೇಜು-ವಿಶ್ವವಿದ್ಯಾಲಯಗಳ ಅಧ್ಯಾಪಕಮಿತ್ರರಿಗೆ ಭಾಷಾ ಬಳಕೆಯ ಮತ್ತು ವಾಕ್ಯ ರಚನೆಯ ಪುನರ್‌ಮನನ ತರಗತಿಗಳನ್ನು (ಶಿಬಿರಗಳನ್ನು) ನಡೆಸುವುದು ಒಳ್ಳೆಯದೆಂದು ತೋರುತ್ತದೆ.

❐

# ದ್ರಾವಿಡ ಬೃಹಚ್ಚರಣ[೧]ರ ಭಾಷೆಯಲ್ಲಿ 'ಸರ್ವನಾಮ' ಮತ್ತು 'ಸರ್ವಪದ'ಗಳು

● ಪ್ರೊ. ಕೆ.ಎಸ್. ಮಧುಸೂದನ

೧.೧ ಪುರುಷ/ಪ್ರಾಣಿ/ವಸ್ತು ವಾಚಕ ಪದಗಳಾಗಿ ಬೃಹಚ್ಚರಣ ಭಾಷೆಯಲ್ಲಿ ಒಟ್ಟು ೨೦ ಕರ್ತೃಘಟಕ-ಪ್ರಥಮಾ ವಿಭಕ್ತ್ಯರ್ಥ ಸಂವಹಕ ರೂಪಗಳಿವೆ.

| ಕ್ರಮ ಸಂಖ್ಯೆ | ಬೃಹಚ್ಚರಣ | ಕನ್ನಡದ ರೂಪ | ಕ್ರಮ ಸಂಖ್ಯೆ | ಬೃಹಚ್ಚರಣ | ಕನ್ನಡದ ರೂಪ |
|---|---|---|---|---|---|
| ೧ | ನಾ | ನಾನು | ೧೧ | ಇವ | ಇವರು |
| ೨ | ನಾಂಗು | ಆವು (ಅಸಮ್ಮುಖ) | ೧೨ | ಒ̃ವು ಆರು | ಯಾವನು |
| ೩ | ನಾಮು | ನಾವು (ಸಸಮ್ಮುಖ) | ೧೩ | ಒವು } ದಾರು | ಯಾವಳು |
| ೪ | ನೀ | ನೀನು | ೧೪ | ಒವ ಯಾರು | ಯಾರು |
| ೫ | ನೀಂಗು | ನೀವು | ೧೫ | ಅದು | ಅದು |
| ೬ | ಅ̃ವು[೩] | ಅವನು | ೧೬ | ಅವಿಗಿ | ಅವು(ಗಳು) |
| ೭ | ಅವು | ಅವಳು | ೧೭ | ಇದು | ಇದು |
| ೮ | ಅ̃ವ | ಅವರು | ೧೮ | ಇವಿಗಿ | ಇವು(ಗಳು) |
| ೯ | ಇವು | ಇವನು | ೧೯ | ಒದು | ಯಾವುದು |
| ೧೦ | ಇವು | ಇವಳು | ೨೦ | ಒವಿಗಿ | ಯಾವುವು |

೧.೨ ಮೇಲಿನವುಗಳಲ್ಲಿ ೧ ರಿಂದ ೧೪ - ಒಟ್ಟು ೧೪ ಘಟಕಗಳು ವ್ಯಕ್ತಿ ವಾಚಕ/ ವ್ಯಕ್ತಿ ಸೂಚಕಗಳಾಗಿದ್ದು ಉಳಿದ ೧೫ ರಿಂದ ೨೦ - ಒಟ್ಟು ೬ ಘಟಕಗಳು

೧. ಸ್ಮಾರ್ತ ಅಯ್ಯರ್ ಬ್ರಾಹ್ಮಣ ಪಂಗಡಗಳಲ್ಲಿ ಒಂದಾದ ಮೈಸೂರು ಮಂಜಿಪುತ್ತೂರು ದ್ರಾವಿಡ ಬೃಹಚ್ಚರಣ ಉಪಪಂಗಡದವರ ಭಾಷೆ. ಈ ಭಾಷೆಯ ಎರಡು ವಾಕ್ಯಗಳನ್ನು ಬಿ.ಜಿ.ಎಲ್. ಸ್ವಾಮಿಯವರು ಕಾಲೇಜು ರಂಗದಲ್ಲಿ 'ನನ್ನ ಅಜ್ಜಿಯ ವಚನ' ಎಂದು ನೀಡಿದ್ದಾರೆ. ಡಿ.ವಿ.ಜಿ., ಬಿ.ಜಿ.ಎಲ್.ಸ್ವಾಮಿ., ಕಾಮರೂಪಿ, ಎಸ್. ದಿವಾಕರ, ಭಾರತಿ ಸಂಪಂಗಿರಾಮಯ್ಯ ಮುಂತಾದ ಕನ್ನಡ ಲೇಖಕರು ಈ ಪಂಗಡದವರು.

೨. 'ಸರ್ವಪದ' ಎಂಬ ಪರಿಕಲ್ಪನೆ ಡಿ.ಎನ್. ಶಂಕರ ಭಟ್ಟರದು. ಆ ಅರ್ಥದಲ್ಲೆ ನಾನು ಇದನ್ನು ಬಳಸಿದ್ದೇನೆ.

೩. ~ ಅನುನಾಸಿಕೀಕರಣ ಚಿಹ್ನೆ

ಪ್ರಾಣಿ/ವಸ್ತು ವಾಚಕ/ಸೂಚಕಗಳಾಗಿವೆ.

೨.೧ ವ್ಯಕ್ತಿ ವಾಚಕ/ವ್ಯಕ್ತಿ ಸೂಚಕ ಸರ್ವನಾಮಗಳ ಪಟ್ಟಿ.

೨.೨ ಬೃಹಚ್ಚರಣರ ಭಾಷೆಯಲ್ಲಿ ಉತ್ತಮ ಪುರುಷ ಬಹುವಚನದಲ್ಲಿ ಎರಡು

| ಉತ್ತಮ ಪುರುಷ (ನಿರೂಪಕ / ಹೇಳುಗ / ಆಡುಗ) ಪುಲ್ಲಿಂಗ ಮತ್ತು ಸ್ತ್ರೀಲಿಂಗ | | | |
|---|---|---|---|
| ಏಕವಚನ | | ಬಹುವಚನ | |
| ಬೃಹಚ್ಚರಣ | ಕನ್ನಡದ ರೂಪ | ಬೃಹಚ್ಚರಣ | ಕನ್ನಡದ ರೂಪ |
| ನಾ | ನಾನು | ನಾಂಗು, ನಾಮು | ಆವು,ನಾವು |

ರೂಪಗಳಿವೆ. ನಾಂಗು(ಆವು) ಮತ್ತು ನಾಮು (ನಾವು). ಇಲ್ಲಿ 'ನಾಂಗು' ಎಂಬ ರೂಪ ಇದಿರಿಗಿರುವವರನ್ನು (ಶ್ರಾವಕ/ಶ್ರೋತೃ/ಕೇಳುಗ ಮತ್ತು ಪ್ರತ್ಯಕ್ಷ ಪ್ರೇಕ್ಷಕ ಹಾಗೂ ಅದೃಶ್ಯ ಪ್ರೇಕ್ಷಕ) ಹೊರತು ಪಡಿಸಿ, ಬಿಟ್ಟಿರುವ ಅರ್ಥದ ಬಹುವಚನ ರೂಪ. 'ನಾಮು' ಎಂಬ ರೂಪ ಇದಿರಿಗಿರುವವರನ್ನು (ಶ್ರಾವಕ/ಶ್ರೋತೃ/ಕೇಳುಗ) ಸೇರಿಸಿಕೊಂಡ, ಒಳಗೊಂಡ ಅರ್ಥದ ಬಹುವಚನ ರೂಪ.

೨.೩ ೨.೧ರಲ್ಲಿ ನೀಡಿರುವ ರೂಪಗಳು ಕರ್ತೃ ಘಟಕ-ಪ್ರಥಮಾ ವಿಭಕ್ತ್ಯರ್ಥ ಸಂವಹಕ ರೂಪಗಳಾಗಿರುವುದರಿಂದ ಕೆಲವು ಸೂಕ್ಷ್ಮಗಳು ನಮ್ಮ ಗ್ರಹಿಕೆಗೆ ಬರುವುದಿಲ್ಲ. ಆದ್ದರಿಂದ ಇವುಗಳ ಇತರ ವಿಭಕ್ತಿರೂಪಗಳ ಕೋಷ್ಟಕವನ್ನು ಗಮನಿಸಬೇಕು.

| ಉತ್ತಮ ಪುರುಷ (ನಿರೂಪಕ/ಹೇಳುಗ/ಆಡುವ) ಪುಲ್ಲಿಂಗ ಮತ್ತು ಸ್ತ್ರೀಲಿಂಗ | | | | | | |
|---|---|---|---|---|---|---|
| | ಏಕವಚನ | | ಬಹುವಚನ (ಅಸಮ್ಮುಖ) | | ಬಹುವಚನ(ಸಸಮ್ಮುಖ) | |
| ವಿಭಕ್ತಿ | ಬೃಹಚ್ಚರಣ | ಕನ್ನಡ | ಬೃಹಚ್ಚರಣ | ಕನ್ನಡ | ಬೃಹಚ್ಚರಣ | ಕನ್ನಡ |
| ಪ್ರಥಮ | ನಾ | ನಾನು, ಆನ್ | ನಾಂಗು | ನಾವು, ಆಂ ಆವು | ನಾಮು | ನಾವು |
| ದ್ವಿತೀಯ | ಎನ್ನೆ | ನನ್ನನ್ನು, ಎನ್ನನ್ನು | ಎಂಗ್ಳೆ | ಎಮ್ಮನ್ನು | ನಮ್ನೆ | ನಮ್ಮನ್ನು |
| ತೃತೀಯ | ಎನ್ದೆ ಅನ್ನು | ನನ್ನಿಂದ, ಎನ್ನಿಂದ | ಎಂಗಳ್ದೆ ಅನ್ನು | ಎಮ್ಮಿಂದ | ನಮ್ದೆ ಅನ್ನು | ನಮ್ಮಿಂದ |
| ಚತುರ್ಥಿ | ಎನಕು | ನನಗೆ, ಎನಗೆ | ಎಂಗಳ್ಕು | ಎಮಗೆ | ನಮಕು | ನಮಗೆ |
| ಪಂಚಮಿ | ಎನ್ದೆ ಅನ್ನು | ನನ್ನಿಂದ,ಎನ್ನಿಂದ | ಎಂಗಳ್ದೆ ಅನ್ನು | ಎಮ್ಮಿಂದ | ನಮ್ದೆ ಅನ್ನು | ನಮ್ಮಿಂದ |
| ಷಷ್ಠಿ | ಎನ್ದೆ, | ನನ್ನ, ನನ್ನದು, | ಎಗಳ್ದೆ, ಎಂಗಳ್ದು | ಎಮ್ಮ,ಎಮ್ಮದು | ನಮ್ದೆ, | ನಮ್ಮ, |
| | ಎನ್ದೇದು | ಎನ್ನ, ಎನ್ನದು | | | ನಮ್ಮದು | ನಮ್ಮದು |
| ಸಪ್ತಮಿ | ಎನ್ದೇಲೆ | ನನ್ನಲ್ಲಿ,ಎನ್ನಲ್ಲಿ | ಎಂಗಳ್ದೇಲೆ, | ಎಮ್ಮಲ್ಲಿ, | ನಮ್ದೇಲೆ, | ನಮ್ಮಲ್ಲಿ, |
| | ಎನ್ದೆ ಉಳ್ಳೆ | ನನ್ನೊಳಗೆ, | ಎಂಗಳ್ದೆ ಉಳ್ಳೆ | ಎಮ್ಮೊಳಗೆ | ನಮ್ದೆ ಉಳ್ಳೆ | ನಮ್ಮೊಳಗೆ |

೨.೪-೧ ಬೃಹಚ್ಚರಣ ಭಾಷೆಯಲ್ಲಿಯೂ ತೃತೀಯಾ ವಿಭಕ್ತಿ ರೂಪವೇ ಪಂಚಮ್ಯರ್ಥವನ್ನು ಸಂವಹಿಸುತ್ತದೆ. ಕ್ವಚಿತ್ತಾಗಿ 'ಎನ್ದೆ ತಟ್ಟೆ ಅನ್ನು' (ನನ್ನ ಕಡೆಯಿಂದ) ಎಂಬ ಬಳಕೆಯುಂಟು.

೨.೪-೨ ಬೃಹಚ್ಚರಣರ ಭಾಷೆಯಲ್ಲಿ ಪ್ರಥಮಾ ವಿಭಕ್ತಿಗೆ ಪ್ರತ್ಯೇಕ ಪ್ರತ್ಯಯವಿಲ್ಲ. ನಾಮ ಪ್ರಕೃತಿಯೇ ಪ್ರಥಮಾ ವಿಭಕ್ತ್ಯರ್ಥವನ್ನು ಸಂವಹನಗೊಳಿಸುತ್ತದೆ.

೨.೪-೩ ಮೇಲಿನ ಕೋಷ್ಟಕದ ೨೧ ರೂಪಗಳಲ್ಲಿ ೧೨ ರೂಪಗಳು 'ಎ' ಕಾರಾದಿಯಾಗಿರುವುದನ್ನು ಗಮನದಲ್ಲಿರಿಸಿಕೊಂಡು ಬೃಹಚ್ಚರಣರ ಭಾಷೆಯಲ್ಲಿ ನಾ(ನಾನು) ಇತ್ಯಾದಿ ಉತ್ತಮ ಪುರುಷ ವ್ಯಕ್ತಿವಾಚಕ ಸರ್ವನಾಮಗಳಿಗೆ ಬಹುಪಾಲು 'ಎ' ಸ್ವರ ಬಳಕೆಯಾಗಿದೆ ಎಂದು ಹೇಳಬಹುದು. ಕನ್ನಡದ ಮಟ್ಟಿಗೂ ಇದು ನಿಜ. 'ಶಬ್ದಮಣಿದರ್ಪಣಂ' ಕೃತಿಯಲ್ಲಿ ಬರುವ 'ಅಮರಯಿರೆನೆವು' ನಾಮಾಖ್ಯಾತ ಪ್ರತ್ಯಯಗಳಲ್ಲಿನ 'ಎನ್' ಮತ್ತು 'ಎವು' ಗಳನ್ನು ಗಮನಿಸಿ. ತೆಲುಗಿನ 'ನೇನು' (ನಾನು) ಹಾಗು 'ಮೇಮು' (ನಾಂಗು, ನಾವು) ಎಂಬ ಪ್ರಥಮಾ ವಿಭಕ್ತಿ ರೂಪದ ಕರ್ತೃಘಟಕಗಳಲ್ಲಿನ ಆರಂಭದ ಸ್ವರ 'ಎ' ಆಗಿರುವುದನ್ನು ಗಮನಿಸಿ.

**೩.೧ ಮಧ್ಯಮ ಪುರುಷ (ಶ್ರಾವಕ/ಶ್ರೋತೃ/ಕೇಳುಗ) ಪುಲ್ಲಿಂಗ / ಸ್ತ್ರೀಲಿಂಗ ವಿಭಕ್ತಿರೂಪಗಳ ಕೋಷ್ಟಕ.**

| | ಏಕವಚನ | | ಬಹುವಚನ | |
|---|---|---|---|---|
| **ವಿಭಕ್ತಿ** | **ಬೃಹಚ್ಚರಣ** | **ಕನ್ನಡ** | **ಬೃಹಚ್ಚರಣ** | **ಕನ್ನಡ** |
| **ಪ್ರಥಮ** | ನೀ | ನೀನು | ನೀಂಗು | ನೀವು |
| **ದ್ವಿತೀಯ** | ಉನ್ನೆ | ನಿನ್ನನ್ನು | ಉನ್ಗಳೆ | ನಿಮ್ಮನ್ನು |
| **ತೃತೀಯ** | ಉನ್ದೆ ಅನ್ನು | ನಿನ್ನಿಂದ | ಉನ್ಗಳೆ ಅನ್ನು | ನಿಮ್ಮಿಂದ |
| **ಚತುರ್ಥಿ** | ಉನಕು | ನಿನಗೆ | ಉನ್ಗಳುಕು | ನಿಮಗೆ |
| **ಪಂಚಮಿ** | ಉನ್ದೆ ಅನ್ನು | ನಿನ್ನಿಂದ | ಉನ್ಗಳ್ದೆ ಅನ್ನು | ನಿಮ್ಮಿಂದ |
| **ಷಷ್ಠಿ** | ಉನ್ದೆ, ಉನ್ದೇದು | ನಿನ್ನ, ನಿನ್ನದು | ಉನ್ಗಳ್ದೆ, ಉನ್ಗಳ್ದು | ನಿಮ್ಮ, ನಿಮ್ಮದು |
| **ಸಪ್ತಮಿ** | ಉನ್ದೇಲೆ, ಉನ್ದೆ | ನಿನ್ನಲ್ಲಿ | ಉನ್ಗಳ್ದೇಲೆ, | ನಿಮ್ಮಲ್ಲಿ, |
| | ಉಳ್ಳೆ | ನಿನ್ನೊಳಗೆ | ಉನ್ಗಳ್ದೆ ಉಳ್ದೆ | ನಿಮ್ಮೊಳಗೆ, |

೩.೨ ಮೇಲಿನ ಕೋಷ್ಟಕದ ಬೃಹಚ್ಚರಣ ಭಾಷೆಯ ೧೨ ರೂಪಗಳು (ಕರ್ತೃ ಘಟಕ ೨ ರೂಪಗಳನ್ನು ಬಿಟ್ಟು) 'ಉ' ಸ್ವರಾದಿಯಾಗಿರುವುದನ್ನು ಗಮನಿಸಬಹುದು. ಇದರ ಆಧಾರದ ಮೇಲೆ ಬೃಹಚ್ಚರಣ ಭಾಷೆಯಲ್ಲಿ ಮಧ್ಯಮ ಪುರುಷ ವ್ಯಕ್ತಿವಾಚಕ ಸರ್ವನಾಮಗಳಿಗೆ 'ಉ' ಸ್ವರ ಬಳಕೆಯಾಗುತ್ತದೆಂದು ಹೇಳಬಹುದು. ತೆಲುಗಿನಲ್ಲಿ ನೀ(ನೀನು) ಎಂಬ ರೂಪಕ್ಕೆ 'ನುವ್ವು' ಎಂಬ ಶಬ್ದ ಬಳಕೆಯಲ್ಲಿದ್ದು ಆ ಶಬ್ದದ ಆರಂಭದ ಸ್ವರ 'ಉ' ಆಗಿರುವುದನ್ನು ಗಮನಿಸಿ.

**೪.೧ ವ್ಯಕ್ತಿವಾಚಕ /ವ್ಯಕ್ತಿಸೂಚಕ ಸರ್ವಪದಗಳ ಕೋಷ್ಟಕ (ಪ್ರತ್ಯಕ್ಷ ದೂರ ಪ್ರೇಕ್ಷಕ/ ಪ್ರತ್ಯಕ್ಷ ಸಮೀಪ ಪ್ರೇಕ್ಷಕ/ಅದೃಶ್ಯ ಪ್ರೇಕ್ಷಕ)**

೪.೧-೧ ಪ್ರತ್ಯಕ್ಷದೂರ ಪ್ರೇಕ್ಷಕ ಸರ್ವಪದ.

| | ಏಕವಚನ | | ಬಹುವಚನ | |
|---|---|---|---|---|
| | ಬೃಹಚ್ಚರಣ | ಕನ್ನಡರೂಪ | ಬೃಹಚ್ಚರಣ | ಕನ್ನಡರೂಪ |
| ಪುಲ್ಲಿಂಗ | ಅ͡ವು | ಅವನು | ಅವ | ಅವರು |
| ಸ್ತ್ರೀಲಿಂಗ | ಅವು | ಅವಳು | ಅವ | ಅವರು |
| ನಪುಂಸಕ ಲಿಂಗ | ಅದು | ಅದು | ಅವಿಗಿ | ಅವುಗಳು |

೪.೧-೨ ಪ್ರತ್ಯಕ್ಷ ಸಮೀಪ ಪ್ರೇಕ್ಷಕ ಸರ್ವಪದ.

| | ಏಕವಚನ | | ಬಹುವಚನ | |
|---|---|---|---|---|
| | ಬೃಹಚ್ಚರಣ | ಕನ್ನಡರೂಪ | ಬೃಹಚ್ಚರಣ | ಕನ್ನಡರೂಪ |
| ಪುಲ್ಲಿಂಗ | ಇ͡ವು | ಇವನು | ಇವ | ಇವರು |
| ಸ್ತ್ರೀಲಿಂಗ | ಇವು | ಇವಳು | ಇವ | ಇವರು |
| ನಪುಂಸಕ ಲಿಂಗ | ಇದು | ಇದು | ಇವಿಗಿ | ಇವುಗಳು |

೪.೧-೩ ಅದೃಶ್ಯ ಪ್ರೇಕ್ಷಕ ಸರ್ವಪದ

| | ಏಕವಚನ | | ಬಹುವಚನ | |
|---|---|---|---|---|
| | ಬೃಹಚ್ಚರಣ | ಕನ್ನಡರೂಪ | ಬೃಹಚ್ಚರಣ | ಕನ್ನಡರೂಪ |
| ಪುಲ್ಲಿಂಗ | ಒ͡ವು } ಆರು / ದಾರು / ಯಾರು | ಯಾವನು | ಒವ } ಆರು / ದಾರು / ಯಾರು | ಯಾರು |
| ಸ್ತ್ರೀಲಿಂಗ | ಒವು | ಯಾವಳು | ಒವ | ಯಾರು |
| ನಪುಂಸಕ ಲಿಂಗ | ಒದು | ಯಾವುದು | ಒವಿಗಿ | ಯಾವುವು |

೪.೧-೩ಎ. ಮೇಲಿನ ೪.೧-೧, ೨, ೩ರ ಕೋಷ್ಟಕದಲ್ಲಿ ಬರುವ ಏಕವಚನ ಪುಲ್ಲಿಂಗ ರೂಪಗಳಾದ ಅವು, ಇವು, ಒವುಗಳಲ್ಲಿ 'ವು' ವರ್ಣವು ಅನುನಾಸಿಕೀಕರಗೊಂಡಿದೆ. ಇವುಗಳ ಪ್ರಾಚೀನ ರೂಪಗಳು ಅವನ್, ಇವನ್, ಒವನ್ ಆಗಿದ್ದು ಕಾಲಾನಂತರ ದಲ್ಲಿ ಅಚಿತ್ಯ 'ನ್' ಕಾರ ಲೋಪವಾಗಿ ಅದರ ನಷ್ಟಪರಿಹಾರಾರ್ಥವಾಗಿ ಅನುನಾಸಿಕೀಕರಣಗೊಂಡಿದೆ ಎಂದು ಹೇಳಬಹುದು.

೪.೧-೪ ೪.೧.೧, ೪.೧.೨ ಮತ್ತು ೪.೧.೩ ರ ಕೋಷ್ಟಕಗಳ ಬಹುವಚನದ ಅವ, ಇವ, ಒವ, (ಅವರು, ಇವರು, ಯಾರು) ಎಂಬ ರೂಪಗಳ ಖಚಿತವಾದ ಲಿಂಗವಿವಕ್ಷೆ ಸಾಧ್ಯವಿಲ್ಲ. ಎಲ್ಲರೂ ಪುರುಷರಾಗಿರಬಹುದು, ಇಲ್ಲವೇ ಸ್ತ್ರೀಯರಾಗಿರ ಬಹುದು ಅಥವಾ ಪುರುಷರೂ ಸ್ತ್ರೀಯರೂ ಆಗಿರಬಹುದು. ಅಷ್ಟರ ಮಟ್ಟಿಗೆ ಇವು ಅನಿಶ್ಚಿತಾರ್ಥಕಗಳು. ಇವನ್ನು ನಪುಂಸಕೇತರ ಲಿಂಗ ರೂಪಗಳು ಎನ್ನಬಹುದು.

೪.೧-೫ ೪.೧.೩ನೇ ಕೋಷ್ಟಕದಲ್ಲಿ ಬರುವ ಬಹುವಚನಾರ್ಥದ 'ಒವ' (ಯಾರು) ರೂಪಕ್ಕೆ ಬೃಹಚ್ಚರಣರ ಭಾಷೆಯಲ್ಲಿ 'ದಾರು' ಎಂಬ ರೂಪವೊಂದುಂಟು. ಇದು ಕನ್ನಡದ 'ಅದಾರು' ರೂಪದ ಆದಿ ಅಕಾರ ಲೋಪವಾಗಿ ಸಿದ್ಧಗೊಂಡಿರುವ ರೂಪ. ಒ͡ವು, ಒವು, ಒವ ರೂಪಗಳಿಗೆ ಆರು, ಯಾರು ಎಂಬ ರೂಪಗಳೂ ಬಳಕೆಯಲ್ಲಿವೆ. 'ಯಾರು' ಸ್ಪಷ್ಟವಾಗಿ ಕನ್ನಡದ ಪ್ರಭಾವದಿಂದ ಬಂದಿದೆ. 'ಯಾರು'ವಿನ ಆದಿ 'ಯ್' ಲೋಪವಾಗಿ 'ಆರು' ಆಗಿದೆ.

೪.೧-೬ ಮೇಲಿನ ಕೋಷ್ಟಕದ ಪುಲ್ಲಿಂಗ ಸ್ತ್ರೀಲಿಂಗ ರೂಪಗಳು ವ್ಯಕ್ತಿವಾಚಕಗಳಾಗಿವೆ.

೪.೧-೭ ಮೇಲಿನ ಕೋಷ್ಟಕಗಳ ನಪಂಸಕಲಿಂಗ ರೂಪಗಳು ಪ್ರಾಣಿ/ವಸ್ತುವಾಚಕಗಳಾಗಿವೆ.

೪.೨ ನಾನು ಇಲ್ಲಿ ಡಿ.ಎನ್. ಶಂಕರ ಭಟ್ಟರು ಕೊಟ್ಟಿರುವ ಕನ್ನಡ ಸರ್ವಪದಗಳ ಕೋಷ್ಟಕದ ಅಡಿಯ ಪ್ರಶ್ನಾರ್ಥಕ ಪದಗಳ ಬೃಹಚ್ಚರಣ ರೂಪಗಳಾದ ಒ͡ವು (ಯಾವನು) ಒವು(ಯಾವಳು) ಒವ (ಯಾರು) ಒದು (ಯಾವುದು) ಮತ್ತು ಒವಿಗಿ(ಯಾವುವು) ಎಂಬ ರೂಪಗಳನ್ನು ಅದೃಶ್ಯ ಪ್ರೇಕ್ಷಕ ಸರ್ವಪದವೆಂದು ಸೂಚಿಸಿದ್ದೇನೆ. ಮೇಲ್ನೋಟಕ್ಕೆ ಈ ರೂಪಗಳು ಪ್ರಶ್ನಾರ್ಥಕಗಳಂತೆ ತೋರುತ್ತವೆ. ಸೂಕ್ಷ್ಮವಾಗಿ ಗಮನಿಸಿದರೆ ಈ ರೂಪಗಳು ಪ್ರತ್ಯಕ್ಷ ದೂರ ಪ್ರೇಕ್ಷಕ ಸರ್ವಪದಗಳಾದ ಅವು(ಅವನು), ಅವು(ಅವಳು), ಅವ(ಅವರು), ಅದು(ಅದು), ಅವಿಗಿ(ಅವುಗಳು), ಮತ್ತು ಪ್ರತ್ಯಕ್ಷ ಸಮೀಪ ಪ್ರೇಕ್ಷಕ ಸರ್ವಪದಗಳಾದ ಇವು(ಇವನು), ಇವು(ಇವಳು), ಇವ(ಇವರು) ಇದು(ಇದು), ಇವಿಗಿ(ಇವುಗಳು) ರೂಪಗಳಿಗೆ ಸಂವಾದಿಯಾದ ಅದೃಶ್ಯ ಪ್ರೇಕ್ಷಕ ಸರ್ವಪದಗಳಾಗಿರುವುದನ್ನು ಗಮನಿಸಬಹುದು. ಶಂಕರಭಟ್ಟರೇ ಇನ್ನೊಂದೆಡೆ ಇವನ್ನೇ 'ಅನಿಶ್ಚಿತಾರ್ಥಕಗಳೆಂದು ಕರೆಯುವುದೇ ಕನ್ನಡದ ಮಟ್ಟಿಗೆ ಯೋಗ್ಯವಾದುದು' ಎಂದಿರುವುದು ಗಮನಾರ್ಹ.

೪.೩ ಶಂಕರಭಟ್ಟರು ಹೇಳಿರುವ ಕನ್ನಡದ ನಿರ್ದೇಶಕ ಪದಗಳಾದ ಅವನು, ಅವಳು, ಅವರು, ಅದು, ಅವುಗಳು ಪದಗಳ ಬೃಹಚ್ಚರಣ ಸಂವಾದಿರೂಪ ಅವು,ಅವು, ಅವ, ಅದು, ಅವಿಗಿ ಎಂಬವುಗಳನ್ನು ಪ್ರತ್ಯಕ್ಷ ದೂರ ಪ್ರೇಕ್ಷಕ ಸರ್ವಪದವೆಂದು ಗುರುತಿಸಿದ್ದೇನೆ. ಇವುಗಳ ಆದಿ ಸ್ವರ 'ಅ' ಎಂಬುದನ್ನು ಗಮನಿಸಿ.

೪.೪ ಹಾಗೆಯೇ ಕನ್ನಡದ ನಿರ್ದೇಶಕ ಪದಗಳಾದ ಇವನು, ಇವಳು, ಇವರು, ಇದು, ಇವುಗಳು ಪದಗಳ ಬೃಹಚ್ಚರಣ ಸಂವಾದಿ ರೂಪ ಇವು, ಇವು, ಇವ, ಇದು, ಇವಿಗಿ- ಎಂಬವುಗಳನ್ನು ಪ್ರತ್ಯಕ್ಷ ಸಮೀಪ ಪ್ರೇಕ್ಷಕ ಸರ್ವಪದವೆಂದು ಸೂಚಿಸಿದ್ದೇನೆ. ಇವುಗಳ ಆದಿ ಸ್ವರ 'ಇ' ಎಂಬುದನ್ನು ಗಮನಿಸಿ.

---

೧, ೨ & ೩ ಈ ಪಾರಿಭಾಷಿಕ ಪದಗಳು ತುಸು ಸಂಸ್ಕೃತ ಭೂಯಿಷ್ಠವೆನಿಸಿದರೂ ಖಚಿತತೆಯ ದೃಷ್ಟಿಯಿಂದ ಈ ಬಗೆಯ ವಿಂಗಡಣೆ ಸೂಕ್ತ ಹಾಗೂ ಅನಿವಾರ್ಯವೆಂಬುದು ನನ್ನ ಗ್ರಹಿಕೆ.

* ಉತ್ತಮ ಪುರುಷದ 'ಆಡುಗ' ಮತ್ತು ಮಧ್ಯಮ ಪುರುಷದ 'ಕೇಳುಗ' ಎಂಬ ಪಾರಿಭಾಷಿಕ ಪದಗಳ ಸೃಷ್ಟಿ ಡಿ.ಎನ್. ಶಂಕರ ಭಟ್ಟರದು.

೪.೫ ಶಂಕರ ಭಟ್ಟರು ಪ್ರಶ್ನಾರ್ಥಕ ಹಾಗೂ ಅನಿಶ್ಚಿತಾರ್ಥಕಗಳೆಂದು ಹೇಳಿರುವ ಕನ್ನಡದ ಯಾವನು, ಯಾವಳು, ಯಾರು, ಯಾವುದು, ಯಾವುವು ಪದಗಳ ಬೃಹಚ್ಚರಣ ಸಂವಾದಿರೂಪ ಒವು, ಒವು, ಒವ, ಒದು, ಒವಿಗಿ–ಎಂಬವುಗಳನ್ನು ಅದೃಶ್ಯಪ್ರೇಕ್ಷಕ ಸರ್ವಪದ'ವೆಂಬ ಶೀರ್ಷಿಕೆಯಡಿ ಪರಿಭಾವಿಸಿದ್ದೇನೆ. ಇವುಗಳ ಆದಿ ಸ್ವರ 'ಒ' ಎಂಬುದನ್ನು ಗಮನಿಸಿ.

೫.೧ ೨.೪.೩ ರಲ್ಲಿನಂತೆ ಉತ್ತಮ ಪುರುಷ ವ್ಯಕ್ತಿವಾಚಕ ಸರ್ವನಾಮಗಳು (ನಿರೂಪಕ/ಹೇಳುಗ/ಆಡುಗ) ಬೃಹಚ್ಚರಣರ ಭಾಷೆಯಲ್ಲಿ 'ಎ' ಸ್ವರದಿಂದ ಆರಂಭವಾಗುತ್ತವೆ.

೫.೨ ೩.೨ರ ಅಂಶದ ಪ್ರಕಾರ ಮಧ್ಯಮ ಪುರುಷ ವ್ಯಕ್ತಿವಾಚಕ ಸರ್ವನಾಮಗಳು (ಶ್ರಾವಕ/ಶ್ರೋತೃ/ಕೇಳುಗ) ಬೃಹಚ್ಚರಣರ ಭಾಷೆಯಲ್ಲಿ 'ಉ' ಸ್ವರದಿಂದ ಆರಂಭಗೊಳ್ಳುತ್ತವೆ.

೫.೩ ೪.೩ರ ಅಂಶದಂತೆ ಪ್ರತ್ಯಕ್ಷದೂರ ಸರ್ವಪದಗಳು ಬೃಹಚ್ಚರಣರ ಭಾಷೆಯಲ್ಲಿ 'ಅ' ಸ್ವರದಿಂದಲೂ ಮತ್ತು ೪.೪ರ ಅಂಶದಂತೆ ಪ್ರತ್ಯಕ್ಷ ಸಮೀಪ ಸರ್ವಪದಗಳು 'ಇ' ಸ್ವರದಿಂದಲೂ ಆರಂಭಗೊಂಡಿವೆ.

೫.೪ ೪.೫ರಂತೆ ಅದೃಶ್ಯ ಪ್ರೇಕ್ಷಕ ಸರ್ವಪದಗಳು ಬೃಹಚ್ಚರಣರ ಭಾಷೆಯಲ್ಲಿ 'ಒ' ಕಾರದಿಂದಾರಂಭವಾಗಿವೆ.

**೫.೫ ಬೃಹಚ್ಚರಣ ಭಾಷೆಯ ಸರ್ವನಾಮ ಮತ್ತು ಸರ್ವಪದಗಳ ಮೂಲಭೂತ ಕೋಷ್ಟಕ.**

| ಎಷ್ಟನೆಯದು | ಏನು | ಯಾವುದು | ಯಾರು | ಯಾವ ಆದಿ ಸ್ವರ |
|---|---|---|---|---|
| ೧ | ವ್ಯಕ್ತಿವಾಚಕ | ಉತ್ತಮಪುರುಷ ಸರ್ವನಾಮ | ನಿರೂಪಕ/ಹೇಳುಗ/ಆಡುಗ | ಎ |
| ೨ | ವ್ಯಕ್ತಿವಾಚಕ | ಮಧ್ಯಮಪುರುಷ ಸರ್ವನಾಮ | ಶ್ರಾವಕ/ಶ್ರೋತೃ/ಕೇಳುಗ | ಉ |
| ೩ | ವ್ಯಕ್ತಿ/ವಸ್ತು / | ಸರ್ವಪದ | ಪ್ರತ್ಯಕ್ಷ ದೂರ ಪ್ರೇಕ್ಷಕ/ಪ್ರಾಣಿ/ | ಅ |
| | ಪ್ರಾಣಿವಾಚಕ | | ವಸ್ತು | |
| ೪ | ವ್ಯಕ್ತಿ/ವಸ್ತು / | ಸರ್ವಪದ | ಪ್ರತ್ಯಕ್ಷ ಸಮೀಪ ಪ್ರೇಕ್ಷಕ/ಪ್ರಾಣಿ/ | ಇ |
| | ಪ್ರಾಣಿವಾಚಕ | | ವಸ್ತು | |
| ೫ | ವ್ಯಕ್ತಿ/ವಸ್ತು/ | ಸರ್ವಪದ | ಅದೃಶ್ಯ ಪ್ರೇಕ್ಷಕ /ಪ್ರಾಣಿ/ವಸ್ತು | ಒ |
| | ಪ್ರಾಣಿವಾಚಕ | | | |

೫.೬. ಬೃಹಚ್ಚರಣ ಭಾಷೆಯು ತನ್ನ ವಿವಿಧ ಸರ್ವನಾಮ ಹಾಗೂ ಸರ್ವಪದಗಳ ಅಭಿವ್ಯಕ್ತಿಗೆ ಅತ್ಯಂತ ಕ್ರಮಬದ್ಧವಾಗಿಯೂ ಸಮರ್ಪಕವಾಗಿಯೂ ಅ, ಇ, ಉ, ಎ, ಒ – ಎಂಬ ಐದೂ ಸ್ವರಗಳನ್ನು ಸಮರ್ಥವಾಗಿ ಬಳಸಿಕೊಂಡಿದೆ.

**ಗ್ರಂಥಋಣ**

ಕನ್ನಡದ ಸರ್ವನಾಮಗಳು – ಡಿ.ಎನ್. ಶಂಕರ ಭಟ್ಟ



**'ಆಳ್ವಾರ್‌ಶರಣರ ತಿರುಪತಿ ತಿಮ್ಮಪ್ಪ'** : ತಿರುನಾರಾಯಣಪುರಂ ಅರೈಯರ್, ವಿಶದವಾಕ್ ಪ್ರಕಾಶನ, #೨೮೫, ಉಪ್ಪುನೀರು ಭಾವಿಬೀದಿ, ಮೇಲುಕೋಟೆ-೫೭೧೪೩೧ ೨೦೦೫, ರಾಯಲ್ ೧/೮ ಸೈಜ್, ೨೮೦ ಪುಟ ಬೆಲೆ ರೂ. ೩೬೫-೦೦

ತಿರುನಾರಾಯಣಪುರಂ ಅರೈಯರ್ ಅವರು ಮೇಲುಕೋಟೆಯಲ್ಲಿ ಚೆಲುವನಾರಾಣನಿಗೆ ಅರೈಯರ್ ಸೇವೆ ಸಲ್ಲಿಸುತ್ತಿರುವ ಭಕ್ತರು. ಅರೈಯರ್ ಸೇವೆ ಎನ್ನುವುದು ಒಂದು ವಿಶಿಷ್ಟ ರೀತಿಯ ಭಕ್ತಿಯ ಸಮರ್ಪಣೆ. ಶ್ರೀವೈಷ್ಣವ ಸಂಪ್ರದಾಯದ ದೇವಾಲಯಗಳಲ್ಲಿ ವಿಶಿಷ್ಟಾದ್ವೈತ ಧರ್ಮದ ಪ್ರಮಾಣಗ್ರಂಥಗಳಾದ ಆಳ್ವಾರರ ದಿವ್ಯ ಪ್ರಬಂಧಗಳಿಂದ ಆಯ್ದ ಪಾಶುರ ಬಿಡಿಪದ್ಯಗಳನ್ನು ವಿಶೇಷ ದಿನ-ಹಬ್ಬ-ಉತ್ಸವಾದಿಗಳಲ್ಲಿ ದೇವರೆದುರು ನೃತ್ಯ-ಭಜನೆಗಳ ಸಮ್ಮಿಶ್ರರೂಪದಲ್ಲಿ ಪ್ರಸ್ತುತ ಪಡಿಸುವ ಒಂದು ಹಾಡಿನ ಶೈಲಿ. ಇದಕ್ಕಾಗಿ ಪ್ರತ್ಯೇಕ ಉಡುಗೆಯ ವಿನ್ಯಾಸವೂ ಇದೆ. ಇದನ್ನು ಈ ಧರ್ಮ ಸಂಸ್ಥಾಪಕರಾದ ಶ್ರೀ ರಾಮಾನುಜರು ಬಳಕೆಗೆ ತಂದರು. ಇದು ಇಂದಿಗೂ ಈ ಸಂಪ್ರದಾಯದ ಮುಖ್ಯ ದೇವಾಲಯಗಳಲ್ಲಿ ಅನೂಚಾನವಾಗಿ ನಡೆದುಕೊಂಡು ಬರುತ್ತಿದೆ. (ವ್ಯಾಸರಾಯರು ಶ್ರೀರಂಗಕ್ಕೆ ಭೇಟಿ ನೀಡಿದ್ದಾಗ ಅಲ್ಲಿಯ ರಂಗನಾಥದೇವಾಲಯದಲ್ಲಿ ನಡೆಯುತ್ತಿದ್ದ ಅರೆಯರ್ ನೃತ್ಯ-ಹಾಡಿನ ಸೇವೆಯನ್ನು ನೋಡಿಯೇ, ಪ್ರಭಾವಿತರಾಗಿ ಕನ್ನಡದಲ್ಲೂ ಏಕೆ ರೂಢಿಗೆ ತರಬಾರದೆಂದು ಚಿಂತಿಸಿ, ಕನ್ನಡ ದಾಸಪಂಥದ ಆಚರಣೆಗೆ ಕಾರಣರಾದರೆಂಬ ಸಂಗತಿಯೇ ಕನ್ನಡ ಸಾಹಿತ್ಯ ವಲಯದಲ್ಲಿರುವುದು). ಈ ಸೇವೆ ವಂಶಪಾರಂಪರ್ಯವಾಗಿದ್ದು ಇಂಥವರನ್ನು ಅರೈಯರ್ ಮನೆತನ ಎಂದೇ ಸಂಪ್ರದಾಯದಲ್ಲಿ ಕರೆಯಲಾಗುತ್ತದೆ. ತಿರುನಾರಾಯಣಪುರಂ ಅರೈಯರ್ ಅವರು ಮೇಲುಕೋಟೆಯಲ್ಲಿ ಈ ಸೇವೆಯನ್ನು ನಡೆಸುತ್ತಿರುವ ಕುಟುಂಬದ ಹಿರಿಯರು, ತೊಂಭತ್ತರ ಹರೆಯದಲ್ಲೂ ಅತ್ಯಂತ ಲವಲವಿಕೆಯಿಂದ ಜೀವನಾಸಕ್ತಿಯನ್ನು ಹೊಂದಿರುವ, ಸುತ್ತಲಿನ ನವ ಪೀಳಿಗೆಯಲ್ಲೂ ಉಲ್ಲಾಸವನ್ನು ತುಂಬುತ್ತಿರುವ ಶ್ರೀ ಅರೈಯರ್ ಅವರು ಧಾರ್ಮಿಕ-ವೈಚಾರಿಕ ಗ್ರಂಥಗಳ ಬರವಣಿಗೆಯಲ್ಲಿ ಸಿದ್ಧಹಸ್ತರು. ಈವರೆಗೆ ಸುಮಾರು ೩೨ ಕೃತಿಗಳನ್ನು ಪ್ರಕಟಿಸಿದ್ದು ಇನ್ನೂ ಸುಮಾರು ೩೫ ಗ್ರಂಥಗಳು ಪ್ರಕಟನೆಗಾಗಿ ಕಾದು ಕುಳಿತಿವೆ. ಬಾಲ್ಯದಲ್ಲಿಯೇ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಸ್ವಾತಂತ್ರ್ಯ ಹೋರಾಟದಲ್ಲೂ ಪಾಲ್ಗೊಂಡು, ನಂತರ ವಿನೋಬಾಜೀಯವರ ಸರ್ವೋದಯ ಮಾರ್ಗದಲ್ಲಿ ಮುಂದು ವರಿಯುತ್ತ, ದೇಶ ದೇಶಗಳನ್ನು ಸುತ್ತಿ, ಪರಿಪೂರ್ಣ ಸ್ವಾತಂತ್ರ್ಯದ ಸಮಾನತೆಯ ತತ್ವವನ್ನು ಸಾರುತ್ತ, ಅಕ್ಷರಶಃ ಪಾಲಿಸುತ್ತ ಹಿಂದಿನ ಮೌಲ್ಯಗಳ ಸಾಕಾರರೂಪಗಳಾಗಿದ್ದಾರೆ. ಸರ್ವಧರ್ಮ ಗಳನ್ನು ಬಲ್ಲ. ಆಳವಾಗಿ ಅಭ್ಯಸಿಸಿರುವ ಅರೈಯರ್ ಅವರು ಗಾಂಧಿ-ವಿನೋಬ ಅವರ

ವೈಚಾರಿಕತೆಯನ್ನು ಮೈಗೂಡಿಸಿಕೊಂಡು ಆಧುನಿಕ ಚಿಂತನೆಗಳೊಂದಿಗೆ ತಮ್ಮ ಬರಹಗಳಿಗೆ ವಿಚಾರ ಪ್ರಚೋದಕ ಶಕ್ತಿಯನ್ನು ತಂದುಕೊಟ್ಟಿದ್ದಾರೆ.

ಮೇಲುಕೋಟೆಯ ಸಂಪ್ರದಾಯಸ್ಥ ಮಡಿವಂತ ಪರಂಪರೆಯನ್ನು ಮೈಗೂಡಿಸಿಕೊಂಡೂ ಅದರೊಟ್ಟಿಗೇ ಆಧುನಿಕ ಜಗತ್ತಿಗೆ ಸಮರ್ಥವಾಗಿ ತೆರೆದುಕೊಳ್ಳುವ, ಸನಾತನ ಮೌಲ್ಯಗಳನ್ನು ಆಧುನಿಕ ಸಂದರ್ಭದಲ್ಲೂ ಒರೆಗೆ ಹಚ್ಚಿ ಗೆಲ್ಲುವ ವೈಚಾರಿಕ ಪ್ರಜ್ಞೆಯ ಇಬ್ಬರು ವಾರಸುದಾರರು ಕನ್ನಡದ ಸಂದರ್ಭದಲ್ಲಿ ಹೊರಬಂದಿದ್ದಾರೆ. ಒಬ್ಬರು ಸಾಹಿತ್ಯವಲಯಕ್ಕೆ ಚಿರಪರಿಚಿತರಾದ ಪು.ತಿ.ನ. ಅವರಾದರೆ ಇನ್ನೊಬ್ಬರೇ ಶ್ರೀ ಅರ್ರೈಯರ್. ಭಾರತೀಯ ಸಾಂಖ್ಯ, ಯೋಗ, ವೇದ, ಉಪನಿಷತ್ತುಗಳನ್ನು ಕರಗತ ಮಾಡಿಕೊಳ್ಳುತ್ತಲೇ ಆಧುನಿಕ ಚಿಂತನೆಗಳನ್ನೂ ಅರಗಿಸಿಕೊಂಡು ಭಾರತೀಯ ಸಂಸ್ಕೃತಿಯ ಪಾರಂಪರಿಕ ಮೌಲ್ಯವನ್ನು ಇನ್ನಷ್ಟು ಎತ್ತರಕ್ಕೆ ಏರಿಸುವ ಪರಿ ಈ ಇಬ್ಬರ ವಿಚಾರಗಳಲ್ಲೂ ಇದೆ. ಪು.ತಿ.ನ. ಅವರದ್ದು ಸಾಹಿತ್ಯದ ವೈಚಾರಿಕತೆಯಾದರೆ ಅರೆಯರ್ ಅವರದ್ದು ಆಧ್ಯಾತ್ಮದ ವೈಚಾರಿಕತೆ. ಕನ್ನಡ, ತಮಿಳು, ಸಂಸ್ಕೃತ, ಹಿಂದಿ, ಇಂಗ್ಲೀಷ್ ಭಾಷೆಗಳಲ್ಲಿ ಕರ್ತೃತ್ವ ಶಕ್ತಿಯನ್ನು ಹೊಂದಿರುವ ಅರೆಯರ್ ಅವರು ಈ ಎಲ್ಲ ಭಾಷೆಗಳಲ್ಲೂ ಹಲವಾರು ಗ್ರಂಥಗಳನ್ನು ಅನುವಾದ ಮಾಡಿದ್ದಾರೆ. ಕನ್ನಡ, ಸಂಸ್ಕೃತಗಳಲ್ಲಿ ಸ್ವತಂತ್ರ ಕೃತಿಗಳನ್ನು ರಚಿಸಿದ್ದಾರೆ. ವಿಶೇಷವಾಗಿ ತಮಿಳು ದಿವ್ಯಪ್ರಬಂಧ ಗಳನ್ನು ಕನ್ನಡ-ಸಂಸ್ಕೃತಗಳಲ್ಲಿ ಅನುವಾದ-ವ್ಯಾಖ್ಯಾನ-ವಿಮರ್ಶೆಗೊಳಪಡಿಸಿದ್ದಾರೆ. 'ತಿರುಪ್ಪಾವೈ'ನ ಕನ್ನಡ-ಸಂಸ್ಕೃತಾನುವಾದ, 'ಮಧುರಕವಿ ಮಾಧುರ್ಯ' ವ್ಯಾಖ್ಯಾನ – ಮುಂತಾದ ಕೃತಿಗಳಲ್ಲಿ ಅರ್ರೈಯರ್ ಅವರ ಪ್ರತಿಭೆ-ಪಾಂಡಿತ್ಯ-ಪ್ರಖರ ವೈಚಾರಿಕತೆ ಮತ್ತು ಜೀವನದರ್ಶನ ಗಳನ್ನು ನೋಡಬಹುದು.

ಇದೀಗ ಬೆಳಕು ಕಂಡಿರುವ 'ಆಳ್ವಾರ್ ಶರಣರ ತಿರುಪತಿ ತಿಮ್ಮಪ್ಪ' ಈ ಸಾಲಿಗೆ ಸೇರುವ ಇಂಥದೇ ಇನ್ನೊಂದು ಮುಖ್ಯಕೃತಿಯಾಗಿ ಗಮನಸೆಳೆಯುತ್ತದೆ. ಇದರ ಮುದ್ರಣ ವಿನ್ಯಾಸವೇ ಇದನ್ನು ಉದ್ಗ್ರಂಥಗಳ ಸಾಲಿಗೆ ಸೇರಿಸುತ್ತದೆ. ಸಾಮಾನ್ಯವಾಗಿ ಉದ್ಗ್ರಂಥಗಳಷ್ಟೇ ಪ್ರಕಟವಾಗುವ ರಾಯಲ್ ೧/೮ ಸೈಜಿನ ಆಕಾರದಲ್ಲಿ ಅತ್ಯಂತ ಸುಂದರವಾಗಿ ಈ ಗ್ರಂಥ ಮುದ್ರಣಗೊಂಡಿದೆ. ಇದರಲ್ಲಿ ತಮಿಳು ಸಂತರಾದ ೧೨ಜನ ಆಳ್ವಾರರ ನಾಲ್ಕು ಸಾವಿರ ಹಾಡುಗಳಲ್ಲಿ (ನಾಲಾಯಿರ ದಿವ್ಯಪ್ರಬಂಧ) ತಿರುಪತಿ ವೆಂಕಟೇಶ್ವರನನ್ನು ಆಯ್ದ ಸುಮಾರು ೨೧೦ ಹಾಡುಗಳಿಗೆ ಕನ್ನಡ ಅನುವಾದ ಮತ್ತು ವಿಸ್ತಾರವಾದ ವ್ಯಾಖ್ಯಾನವನ್ನು ಕೊಡಲಾಗಿದೆ. ಮೂಲವನ್ನೂ ಕೊಟ್ಟು ಅನುವಾದಕ್ಕೆ 'ಕನ್ನಡನೆರಳ್' ಎಂದು ಹೆಸರಿಸಿದೆ. ಇದರೊಂದಿಗೆ ವಿವಿಧ ಶ್ರೀವೈಷ್ಣವ ಆಚಾರ್ಯರ ೧೨ ವೆಂಕಟೇಶ್ವರ ಸ್ತುತಿಗಳನ್ನೂ ಸೇರಿಸಿ ಒಟ್ಟು ೨೨೨ ಹಾಡುಗಳಿಗೆ ಅನುವಾದ ಮತ್ತು ವ್ಯಾಖ್ಯಾನಗಳಿವೆ. ಈ ವ್ಯಾಖ್ಯಾನಗಳಲ್ಲಿ ಅರೆಯರ್‌ಅವರ ವಿಸ್ತಾರವಾದ ಜೀವನಾನುಭವದಿಂದ ಅರಳುಗಟ್ಟಿರುವ ಅದ್ಭುತವಾದ 'ಜೀವನ ದರ್ಶನ' ಮಡುಗಟ್ಟಿದೆ. ಲೌಕಿಕ ಬದುಕಿಗೆ ಅಗತ್ಯವಾದ ಆಧ್ಯಾತ್ಮಿಕ ವಿಚಾರ ಪ್ರತಿಭೆ, ವೇದಾಂತ ಚಿಂತನೆ, ವೈಚಾರಿಕ ದೃಷ್ಟಿಗಳು ಓದುಗರಿಗೆ ಹೆಜ್ಜೆ ಹೆಜ್ಜೆಗೆ ಎಡತಾಕುತ್ತವೆ.

ಈ ಕೃತಿಯ ಶೀರ್ಷಿಕೆಯಲ್ಲಿರುವ 'ಆಳ್ವಾರ್ ಶರಣರು' ಕನ್ನಡ ಸಾಹಿತ್ಯದ ಓದುಗರಿಗೆ ಸ್ವಲ್ಪ ಅಪರಿಚಿತವಾಗಿರುವುದರಿಂದ ಸಂಕ್ಷಿಪ್ತವಾಗಿ ವಿವರಿಸುವ ಅಗತ್ಯವಿದೆ. ಈ 'ಆಳ್ವಾರರು'

ಎಂಬುದು ತಮಿಳುಪದವಾಗಿದ್ದು 'ಭಕ್ತರು' ಎಂಬ ಅರ್ಥವನ್ನು ಹೊಂದಿದೆ. ಶ್ರೀ ವೈಷ್ಣವ ಧರ್ಮದ ಪುರಾತನ ಭಕ್ತರು ೧೨ ಜನರಿದ್ದು ಇವನ್ನು 'ಆಳ್ವಾರರು' ಎನ್ನಲಾಗಿದೆ. ಈ ೧೨ ಜನ ಆಳ್ವಾರರಲ್ಲಿ ಒಬ್ಬ ಮಹಿಳೆಯಿದ್ದು ಅವಳನ್ನು 'ಆಂಡಾಳ್' ಎಂದು ಕರೆದಿದೆ. ಇವರೆಲ್ಲ, ಕನ್ನಡಕ್ಕೆ ಹರಿಹರ ಪರಿಚಯಿಸಿರುವ ತಮಿಳಿನ ಪುರಾತನ ಶೈವ ಭಕ್ತರಂತೆ (ನಂಬಿಯಣ್ಣ, ಇಳೆಯಾಂಡ, ತಿರುನೀಲಕಂಠ, ಸಿರಿಯಾಳ ಇತ್ಯಾದಿ) ವಿವಿಧ ಜಾತಿ, ವೃತ್ತಿ, ವರ್ಗಗಳಿಂದ ಕಂಡುಬಂದಿರುವ ಸಾಮಾನ್ಯ ಜನ ಪ್ರತಿನಿಧಿಗಳಾದ ನಿಜ ಭಕ್ತರು, ತಮ್ಮ ನಿಷ್ಠಾವಂತ ಸರಳ ಭಕ್ತಿಯಿಂದ ದೇವರನ್ನೊಲಿಸಿಕೊಂಡು ಪವಾಡಪುರುಷರಾಗಿ ದೇವರುಗಳೇ ಆಗಿರುವ ದಾರ್ಶನಿಕರು. ಇವರು ಸ್ವಯಂಪ್ರೇರಿತವಾಗಿ ಹಾಡಿರುವ ಹಾಡುಗಳನ್ನೆಲ್ಲ ಸಂಗ್ರಹಿಸಿ 'ನಾಲಾಯಿರ ದಿವ್ಯಪ್ರಬಂಧಗಳು' ಎಂದು ರಾಮಾನುಜಾಚಾರ್ಯರ ಕಾಲಕ್ಕೂ ಮುಂಚೆಯೇ ಸಂಕಲಿಸಲಾಗಿದೆ. ಈ ಹಾಡುಗಳು ಸುಂದರ ಭಾವಗೀತೆಗಳಂತಿವೆ. ಕನ್ನಡದ ವಚನಗಳನ್ನು, ದಾಸರ ಹಾಡುಗಳನ್ನು ಇವಕ್ಕೆ ಹೋಲಿಸಬಹುದು. ಇವರುಗಳ ಕಾಲವನ್ನು ಐತಿಹಾಸಿಕವಾಗಿ ಕ್ರಿ.ಶ. ೮-೯ನೇ ಶತಮಾನವೆಂದು ವಿದ್ವಾಂಸರು ನಿರ್ಧರಿಸಿದ್ದರೆ, ಸಂಪ್ರದಾಯ, ಕಲಿಯುಗಾರಂಭ ಕಾಲದವರೆಂದು ಹೇಳುತ್ತದೆ. ಇವರನ್ನೇ ಇಲ್ಲಿ ಅರೆಯರ್ ಅವರು 'ಆಳ್ವಾರ್‌ಶರಣರು' ಎಂದು ಕರೆದಿರುವುದು, ಪುಸ್ತಕದ ಮುಖಪುಟದ ೨ನೇ ಪುಟದಲ್ಲಿ ಈ ಎಲ್ಲ ಹನ್ನೆರಡು ಜನ ಆಳ್ವಾರರ ಸುಂದರವಾದ ವರ್ಣಚಿತ್ರಗಳನ್ನು ನೀಡಲಾಗಿದೆ. ಅವರೆಂದರೆ :ಪೊಯ್‌ಗೈಆಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಯಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ಕುಲಶೇಖರಾಳ್ವಾರ್, ತೊಂಡರಡಿಪ್ಪಡಿಯಾಳ್ವಾರ್, ತಿರುಪ್ಪಾಣಾಳ್ವಾರ್, ತಿರುಮಂಗೈಆಳ್ವಾರ್ ಮಧುರಕವಿಯಾಳ್ವಾರ್, ನಮ್ಮಾಳ್ವಾರ್. ಈ ಹನ್ನೆರಡು ಜನ ಆಳ್ವಾರರನ್ನು ಅವರ ಜಾತಿಯ ಹಿನ್ನೆಲೆಯಲ್ಲಿ ಅರೆಯರ್ ಅವರು ಕನ್ನಡದ ಹೆಸರಿನಲ್ಲಿ ಗುರುತಿಸಿದ್ದಾರೆ. ಕ್ರಮವಾಗಿ ಕೊಳದ ಪೊಯ್ಗಣ್ಣ, ಬಳ್ಳಿಯ ಬೂತಣ್ಣ, ನೈದಿಲ ಪೇಯಣ್ಣ ಎಂದು ಮೊದಲ ಮೂವರನ್ನು ಹೆಸರಿಸಿದ್ದಾರೆ. ಇವರ ಹುಟ್ಟು, ಜಾತಿ-ಮತ ಯಾವುದೂ ಗೊತ್ತಿಲ್ಲದಿರುವುದರಿಂದ ಸಂಪ್ರದಾಯ ಇವರನ್ನು 'ಪುಷ್ಪಜಾತ'ರೆಂದಿರುವುದರ ಹಿನ್ನೆಲೆಯಲ್ಲಿ ಹೂವಿನ ಸಂಬಂಧದಲ್ಲೆ ಹೆಸರಿಸಿರುವುದು ಔಚಿತ್ಯಪೂರ್ಣವಾಗಿದೆ. ಉಳಿದವರನ್ನು ಮೇದರ ಮಳಿಗಯ್ಯ, ಹಾರವರ ಪೆರಿಯಯ್ಯ, ಆಂಡಾಳಕ್ಕ (ಗೋದಕ್ಕ), ಅರಸರ ಕುಲಶೇಖರಯ್ಯ, ತೊಂಡರ ನಾರಣಯ್ಯ, ಪೊಲೆಯರ ಪಾಣಪ್ಪ, ಬೇಡರ ನೀಲಪ್ಪ, ಮಧುರಣ್ಣ, ಒಕ್ಕಲಿಗರ ಮಾರಪ್ಪ, ಎಂದಿರುವುದು ಉಚಿತವಾಗಿದ್ದು ಕನ್ನಡದ ವಚನಕಾರರನ್ನು ನೆನಪಿಸುವಂತಿದೆ.

ಇವರಲ್ಲಿ ಮಧುರಕವಿ ಮತ್ತು ತೊಂಡರಡಿಪ್ಪಡಿ ಇಬ್ಬರನ್ನು ಬಿಟ್ಟು ಉಳಿದವರ ಪ್ರಬಂಧಗಳಿಂದ ತಿರುಪತಿ ತಿಮ್ಮಪ್ಪನನ್ನು ಸ್ತುತಿಸಿರುವ ಹಾಡುಗಳಿಗೆ ಕನ್ನಡ-ಭಾವಾನುವಾದ ಮತ್ತು ವಿಸ್ತಾರವಾದ ವಿಚಾರ ಪ್ರಚೋದವಾದ ವಿವರಣಾರ್ಥವನ್ನೂ ನೀಡಿದ್ದಾರೆ. ಮೂಲವನ್ನು 'ತಮಿಳು ತಿರಳ್' ಎಂದೂ ಅನುವಾದವನ್ನು 'ಕನ್ನಡ ನೆರಳ್' ಎಂದೂ ಹೆಸರಿಸಿರುವುದು ಅರ್ಥಪೂರ್ಣವಾಗಿದೆ. ಅನುವಾದ ತಮಿಳಿಗೆ ತೀರ ಸಮೀಪವಾಗಿಯೇ ಇದೆ.

ತಿರುಪತಿಯು ಶ್ರೀವೈಷ್ಣವರ ನಾಲ್ಕು ಪ್ರಮುಖ ದಿವ್ಯ ದೇಶಗಳಲ್ಲಿ ಒಂದಾಗಿದೆ. (ಉಳಿದ ಮೂರು : ಶ್ರೀರಂಗ, ಕಂಚಿ, ಮೇಲುಕೋಟೆ) ಈ ನಾಲ್ಕು ಕ್ಷೇತ್ರಗಳನ್ನು ರಾಮಾನುಜರೇ

ಅಭಿವೃದ್ಧಿ ಪಡಿಸಿರುವುದು ನಿಜವಾದರೂ ಅವರಿಗಿಂತ ಹಿಂದಿನಿಂದಲೂ ಈ ಕ್ಷೇತ್ರಗಳು ಪ್ರಸಿದ್ಧವಾಗಿದ್ದವೆಂಬುದಕ್ಕೆ ಐತಿಹಾಸಿಕ ದಾಖಲೆಗಳಿವೆ. ತಿರುಪತಿ ತಿಮ್ಮಪ್ಪನ ಕ್ಷೇತ್ರ ಮೊದಲಿಗೆ ಶೈವ ಕ್ಷೇತ್ರವಾಗಿತ್ತೆಂಬ ಸಂಗತಿಯನ್ನು ಪ್ರೊ॥ ಎಸ್.ಕೆ. ರಾಮಚಂದ್ರರಾವ್ ಅವರು ತಮ್ಮ 'ತಿರುಪತಿ ತಿಮ್ಮಪ್ಪ' ಕೃತಿಯಲ್ಲಿ ಪ್ರತಿಪಾದಿಸುತ್ತಾರೆ. ಈ ಶೈವಕ್ಷೇತ್ರವನ್ನು ರಾಮಾನುಜರು ಶ್ರೀವೈಷ್ಣವ ಕ್ಷೇತ್ರವನ್ನಾಗಿ ಪರಿವರ್ತಿಸಿದರು ಎಂದೂ ಅಭಿಪ್ರಾಯಪಡುತ್ತಾರೆ. ಆದರೆ ರಾಮಾನುಜರಿಗಿಂತಲೂ ೨೦೦-೩೦೦ ವರ್ಷಗಳ ಹಿಂದಿನಿಂದಲೂ ಅದು ಶ್ರೀವೈಷ್ಣವ ಕ್ಷೇತ್ರವಾಗಿಯೇ ಇದ್ದಿತೆಂಬುದು ಈ ಆಳ್ವಾರರ ಸ್ತುತಿಗಳಿಂದ ಖಚಿತವಾಗುತ್ತದೆ. ಎಲ್ಲ ಆಳ್ವಾರರೂ ಈ ಕ್ಷೇತ್ರವನ್ನು ಸಂದರ್ಶಿಸಿ ವೆಂಕಟೇಶ್ವರನನ್ನು ಹಾಡಿ ಹೊಗಳಿದ್ದಾರೆ. ತಿಮ್ಮಪ್ಪನನ್ನು 'ತಿರುವೇಂಗಡ' ಎಂದೇ ಸ್ಪಷ್ಟವಾಗಿ ಹೆಸರಿಸಿದ್ದಾರೆ.

ಆಳ್ವಾರರ ವೈಶಿಷ್ಟ್ಯವಿರುವುದು ಕೇವಲ ದೇವರನ್ನು ಸ್ತುತಿಸುವುದಷ್ಟೇ ಆಗಿರದೆ ಆ ಸ್ಥಳವನ್ನು ಸುಂದರವಾಗಿ ಚಿತ್ರಿಸುವುದು, ದೇವಾಲಯ, ಅದರ ಪ್ರಾಕಾರ, ಅದಿರುವ ಪ್ರದೇಶ, ಅಲ್ಲಿಯ ನದಿ, ಬೆಟ್ಟ, ಗಿಡ, ಮರ, ಊರು, ಜನ ಇವುಗಳೆಲ್ಲದರ ಚಿತ್ರಣವನ್ನೂ ಈ ಹಾಡುಗಳು ನೀಡುತ್ತವೆ. ಒಟ್ಟಾರೆ ಪ್ರಕೃತಿ, ಪ್ರದೇಶ ಮತ್ತು ಜನಪದರ ಚಿತ್ರಣವನ್ನೇ ಇವು ಕಟ್ಟಿಕೊಡುತ್ತವೆ. ಹಾಗಾಗಿ ಇವು ಕೇವಲ ದೈವಸ್ತುತಿಗಳಾಗಿರದೆ ಸುಂದರ ಪ್ರಕೃತಿ ಗೀತೆಗಳೂ ಜೀವನ ಗೀತೆಗಳೂ ಆಗಿರುತ್ತವೆ. ಆದರೆ ದುರದೃಷ್ಟವಶಾತ್ ಆಳ್ವಾರರ ಹಾಡುಗಳನ್ನು ಕೇವಲ ಧಾರ್ಮಿಕ ಗೀತೆಗಳನ್ನಾಗಿ ಸಂಪ್ರದಾಯ ಪರಿಗಣಿಸಿರುವುದರಿಂದ 'ಮಡಿವಂತ ಸಾಹಿತ್ಯ'ವನ್ನಾಗಿಯೇ ನೋಡಲಾಗುತ್ತಿದೆ. ಹೀಗಾಗಿ ತಮಿಳು ಸಾಹಿತ್ಯಚರಿತ್ರೆಯೂ ಇದನ್ನು ಧಾರ್ಮಿಕ ಸಾಹಿತ್ಯವನ್ನಾಗಿ ಪರಿಗಣಿಸಿದೆಯೇ ವಿನಾ ಸಾಹಿತ್ಯ ಕೃತಿಯನ್ನಾಗಿ ವಿಶ್ಲೇಷಿಸಿಲ್ಲ.

ಕರ್ನಾಟಕದಲ್ಲಿ ಆಳ್ವಾರ್ ಸಾಹಿತ್ಯ ವಿಪುಲವಾಗಿ ಬಂದಿದೆ. ಆದರೆ ಅದೆಲ್ಲ ಧಾರ್ಮಿಕ ಸಾಹಿತ್ಯವಾಗಿಯೇ ಕಾಣಿಸಿಕೊಂಡಿದೆ. ಆಳ್ವಾರರ ನಾಲಾಯರ ದಿವ್ಯ ಪ್ರಬಂಧಕ್ಕೆ ಇಡಿಯಾಗಿ ಮತ್ತು ಬಿಡಿಬಿಡಿಯಾಗಿ ನೂರಾರು ಕೃತಿಗಳು ಕನ್ನಡದಲ್ಲಿ ಬಂದಿವೆ. ಅವೆಲ್ಲ ಪ್ರವಚನ, ಅರ್ಥ, ವ್ಯಾಖ್ಯಾನಗಳಾಗಿವೆ, ತಾತ್ಪರ್ಯ-ಗದ್ಯಾನುವಾದಗಳಾಗಿವೆ. ಕೆಲವು ಪದ್ಯಾನುವಾದಗಳೂ ಇವೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶ್ರೀವೈಷ್ಣವ ಮತೀಯ ಸಾಹಿತಿಗಳ ಪರಂಪರೆಯೇ ಇದ್ದರೂ ಅವರುಗಳಲ್ಲಿ ಕೆಲವರು ಈ ಆಳ್ವಾರ್ ಸಾಹಿತ್ಯದತ್ತ ಗಮನಹರಿಸಿದ್ದರೂ ಅವರುಗಳೂ ಧಾರ್ಮಿಕ ಶ್ರದ್ಧಾಳುಗಳಾಗಿಯಷ್ಟೇ ಅನುವಾದ-ಅರ್ಥವಿವರಣೆ ನೀಡಿದ್ದಾರೆಯೇ ವಿನಾ ಸಾಹಿತ್ಯ ದೃಷ್ಟಿಯಿಂದ ನೋಡಿಲ್ಲ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಎಸ್.ಕೆ.ಆರ್. ಅವರು ಮಾತ್ರ ಒಂದು ಪ್ರಯತ್ನ ಮಾಡಿದ್ದರೂ ಮುಂದುವರಿಸಿಲ್ಲ. ಪ್ರಸ್ತುತ ವಿಮರ್ಶಕನ 'ಆಳ್ವಾರರ ಹಾಡುಗಳು' 'ಕನ್ನಡ ತಿರುಪ್ಪಾವೈ' ಕೃತಿಗಳಲ್ಲಿ ಆಳ್ವಾರ್ ಸಾಹಿತ್ಯವನ್ನು ಸಾಹಿತ್ಯದೃಷ್ಟಿಯಲ್ಲಿ ನೋಡಿರುವ, ನೇರ ಪದ್ಯಾನುವಾದ ಮಾಡಿರುವ ಪ್ರಯತ್ನವಿದೆ.

ಅರೆಯರ್ ಅವರ ಈ ಕೃತಿಯಲ್ಲಿಯೂ ಸಾಹಿತ್ಯ ದೃಷ್ಟಿಯನ್ನು ಕಾಣಲಾಗದಿದ್ದರೂ ವೈಚಾರಿಕ ದೃಷ್ಟಿಯಿಂದ ಗಮನ ಸೆಳೆಯುತ್ತದೆ. ಆಧುನಿಕ ಚಿಂತನೆಗಳನ್ನು ಅಳವಡಿಸಿ ಕೊಂಡಿದ್ದರೂ ಆಧ್ಯಾತ್ಮಿಕ ದೃಷ್ಟಿಯೇ ಮುಖ್ಯವಾಗಿದೆ. ನಾಲ್ಕು ಸಾಲಿನ ಒಂದು ಹಾಡಿಗೆ ನಾಲ್ಕು ಪುಟಗಳವರೆಗೂ ವಿಸ್ತಾರವಾದ ವಿವರಣೆಯಿದೆ. ಅರೆಯರ್ ಅವರು ತಮ್ಮ ತೊಂಭತ್ತು

ವರ್ಷಗಳ ತುಂಬು ಜೀವನದ ಸಮಸ್ತ ಅನುಭವವನ್ನೂ ಈ ವ್ಯಾಖ್ಯಾನದಲ್ಲಿ ಅಳವಡಿಸಿದ್ದಾರೆ. ವೇದ-ಉಪನಿಷತ್ತು, ಭಗವದ್ಗೀತೆ, ಭಾಗವತಗಳ ಸಾರವನ್ನೂ ಗಾಂಧಿ-ವಿನೋಬ, ಪಾಶ್ಚಾತ್ಯ ಚಿಂತಕರ ಅಭಿಪ್ರಾಯಗಳನ್ನೂ ಸಾಣೆ ಹಿಡಿದು ತಮ್ಮದೇ ಆದ ಸರ್ವೋದಯ ತತ್ವದ ದೃಷ್ಟಿಯನ್ನು ಈ ವ್ಯಾಖ್ಯಾನದಲ್ಲಿ ಚೊಕ್ಕವಾಗಿ ಅಳವಡಿಸಿದ್ದಾರೆ. ಪ್ರಾಚೀನ ಚಿಂತನೆಯನ್ನು ಆಧುನಿಕ ದೃಷ್ಟಿಕೋನದಲ್ಲಿ ನೋಡಿರುವುದು ಇಲ್ಲಿಯ ವೈಶಿಷ್ಟ್ಯ. 'ಸೇವಾವಿಜ್ಞಾನದ ರಹಸ್ಯವನ್ನು ತಮ್ಮಿಷ್ಟಾನುಭವದಿಂದ ಬಿತ್ತರಿಸುವವರೇ ನಿಜಶರಣರು, ಕಾಯಕವೇ ಕೈಲಾಸ, ಕೈಂಕರ್ಯವೇ ವೈಕುಂಠ, ಟ್ರೇಡ್‌ಲೇಬರ್, ಉತ್ಪಾದಕ ಶರೀರ ಪರಿಶ್ರಮವೇ ದ್ರವ್ಯಯಜ್ಞ, ಅನ್ನಯಜ್ಞ ಸೂತ್ರಯಜ್ಞ,' ಎಂಬ ವಿಶಿಷ್ಟ ಮಾತಿನ ಮೂಲಕ ಅರೆಯರ್ ಅವರ ಪ್ರಾಚೀನ-ಅರ್ವಾಚೀನ ಸಂಸ್ಕೃತಿಗಳ ಸಂಗಮದೃಷ್ಟಿಯನ್ನು ಕಾಣಬಹುದು. 'ಪ್ರಸ್ತುತ ಕಾಲ-ದೇಶಗಳಿಗೂ ಈ ಆಳ್ವಾರ್ ಶರಣರ ವಾಙ್ಮಯ ವೈಜ್ಞಾನಿಕ ಹಾಗೂ ಸಾಮಾಜಿಕವಾಗಿಯೂ ಬಲು ಆಳವಾದ, ಪರಿವರ್ತನಕಾರಿಯಾದ 'ಅಹಿಂಸದ ಶಾಂತಿಮಯ ಪ್ರೇಮಳ ಕ್ರಾಂತಿ' ಮಾಧ್ಯಮ ಎನ್ನುವುದನ್ನು ತೋರಿಸಲು ಪ್ರಯತ್ನಪಟ್ಟಿದೆ' ಎಂಬ ಮುನ್ನುಡಿಯ ಮಾತಿನಲ್ಲಿ ಅರೆಯರ್ ಅವರ ದೃಷ್ಟಿ ಸ್ಪಷ್ಟವಾಗಿದೆ. ತಮ್ಮ ಜೀವನಾನುಭವ, 'ಹಳೆಶರಣರು' (ದಾರ್ಶನಿಕರು) 'ಹೊಸಶರಣರು' (ಆಧುನಿಕ ಆಧ್ಯಾತ್ಮ ಚಿಂತಕರು) ಇವರ ಸಂಪರ್ಕ - ಸಂಯೋಗಗಳನ್ನು ಇದಕ್ಕೆ ಪುಷ್ಟಿಯಾಗಿ ಪಡೆದಿದ್ದಾರೆ.

ಪಂಚದ್ರಾವಿಡ ಭಾಷೆಗಳ ಸಾಹಿತ್ಯದ ಆದಾನ-ಪ್ರದಾನವಾಗಬೇಕೆಂಬ ಹಂಬಲವನ್ನು ಅರೆಯರ್ ಈ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಒಟ್ಟಾರೆ ಭಾರತೀಯ ಸಾಹಿತ್ಯದಲ್ಲಿಯೇ ಈ ಕ್ರಿಯೆನಡೆದು 'ಭಾವೈಕ್ಯ' ತೋರಬೇಕಾಗಿರುವುದು ಇಂದಿನ ಅಗತ್ಯವಾಗಿದೆಯೆಂಬ ಸಮಕಾಲೀನ ಚಿಂತನೆಯನ್ನು ಸಮರ್ಥವಾಗಿ ಮಂಡಿಸುತ್ತ ಇಂದಿನ ದ್ವೇಶ ರಾಜಕೀಯಕ್ಕೆ ಪರಿಹಾರವಾಗಿ ಶಾಂತಿಸಂದೇಶವನ್ನು ಬಿತ್ತುವ ಈ ಕೃತಿ 'ಪ್ರಾಕ್ಟಿಕಲ್ ಸ್ಟಡಿ'ಯೂ ಆಗಬಲ್ಲದೆಂಬ ಮೌಲಿಕವಾದ ಸಾಮಾಜಿಕ ಚಿಂತನೆಯನ್ನು ತಂದಿದ್ದಾರೆ. ತಮ್ಮ ವಿಸ್ತಾರವಾದ ವ್ಯಾಖ್ಯಾನದಲ್ಲಿ ಈ ಎಲ್ಲ ಅಂಶಗಳನ್ನು ಸೋದಾಹರಣವಾಗಿ ವಿಶ್ಲೇಷಿಸಿದ್ದಾರೆ. ಪೂರ್ವಸೂರಿಗಳ ವ್ಯಾಖ್ಯಾನಗಳ ಸಾರವನ್ನು ತಂದಿದ್ದರೂ ಅದನ್ನೂ ಮೀರಿ ಅರೆಯರ್ ಅವರದೇ ವಿಶಿಷ್ಟವಾದ ಶ್ರಮದಾನ ಕಲ್ಪನೆಯ ಸರ್ವೋದಯ ತತ್ವದಿಂದ ಕೂಡಿದ ಸ್ವತಂತ್ರ ವ್ಯಾಖ್ಯಾನವಾಗಿ ಈ ಕೃತಿ ವಿಶಿಷ್ಟವಾಗಿ ನಿಲ್ಲುತ್ತದೆ.

ಆಳ್ವಾರರ ಸಾಹಿತ್ಯವನ್ನು ಈ ಬಗೆಯ ಆಧುನಿಕ ಚಿಂತನೆಯ ಒರೆಗಲ್ಲಿಗೆ ಹಚ್ಚಿ ಹೊಸ ಹೊಸ ವ್ಯಾಖ್ಯಾನಗಳಿಗೆ ಒಳಪಡಿಸಬೇಕಾದ ಅಗತ್ಯವಿದ್ದು ಅದಕ್ಕೆ ಈ ಕೃತಿ ನಾಂದಿಯಾಗ ಬಲ್ಲದಾಗಿದೆ.

❑

# ಲೇಖಕರ ವಿಳಾಸಗಳು

೧. **ಪ್ರೊ.ಜಿ. ಅಬ್ದುಲ್ ಬಷೀರ್,**
ನಿವೃತ್ತ ಕನ್ನಡ ಪ್ರಾಧ್ಯಾಪಕರು,
ನಂ.೫, ೮ನೆಯ ಅಡ್ಡರಸ್ತೆ,
ಬೈರಸಂದ್ರ, ಜಯನಗರ,
೧ನೆಯ ಬಡಾವಣೆ,
ಬೆಂಗಳೂರು – ೫೬೦ ೦೧೧.
ದೂರವಾಣಿ : ೯೦೦೮೭೬೩೩೩೬

೧. **ಡಾ. ದೇಜಗೌ**
'ಕಲಾನಿಲಯ'
ಜಯಲಕ್ಷ್ಮೀಪುರಂ,
ಮೈಸೂರು – ೫೭೦ ೦೧೨.

೨. **ಡಾ॥ಟಿ.ವಿ. ವೆಂಕಟಾಚಲಶಾಸ್ತ್ರೀ**
ನಂ.೬೮ 'ಬಿ', ಆಶ್ರಮದ ರಸ್ತೆ,
ಜಯಲಕ್ಷ್ಮೀಪುರಂ,
ಮೈಸೂರು – ೫೭೦ ೦೧೨.

೩. **ಎಸ್.ವಿ. ಶ್ರೀನಿವಾಸರಾವ್**
ನಂ.೪೩೦, 'ಸೌರಭ',
೧೭ನೆಯ ಮುಖ್ಯರಸ್ತೆ, ಶ್ರೀನಗರ,
ಬೆಂಗಳೂರು – ೫೬೦ ೦೫೦

೪. **ಡಾ. ನಾ. ಗೀತಾಚಾರ್ಯ**
ನಂ. ೨೩/೨, ೫ನೆಯ ಅಡ್ಡರಸ್ತೆ,
ಕೆಂಪೇಗೌಡನಗರ,
ಬೆಂಗಳೂರು – ೫೬೦ ೦೧೯

೫. **ಶ್ರೀ ಎಂ.ಎಸ್. ಪ್ರಭಾಕರ್**
ನಂ.೩೪೬, ೭ನೆಯ ಅಡ್ಡರಸ್ತೆ,
೮ನೆಯ ಮುಖ್ಯರಸ್ತೆ,
ಪದ್ಮನಾಭನಗರ,
ಬೆಂಗಳೂರು – ೫೬೦ ೦೭೦.

೬. **ಶ್ರೀ ಎಸ್. ಮಲ್ಲನಗೌಡ**
ಸಂಶೋಧನ ವಿದ್ಯಾರ್ಥಿ,
ಸಂಸ್ಕೃತ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ – ೦೩

೭. **ಡಾ. ಕೆಳದಿ ಗುಂಡಾಜೋಯಿಸ್**
ಕೆಳದಿವಸ್ತು ಸಂಗ್ರಹಾಲಯ,
ಕೆಳದಿ, ಸಾಗರ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

೮. **ಪ್ರೊ.ಕೆ.ಎಸ್. ಮಧುಸೂದನ**
ನಿವೃತ್ತ ಪ್ರಿನ್ಸಿಪಾಲರು,
ಶೇಷಾಂಕ ೧೫೫, ವೈ,
೩ನೆಯ ಮುಖ್ಯರಸ್ತೆ,
೭ನೆಯ ಬಡಾವಣೆ, ೪ನೆಯ ಫೇಸ್,
ಬಿಎಸ್‌ಕೆ ೩ನೆಯ ಹಂತ,
ಬೆಂಗಳೂರು – ೫೬೦ ೦೮೫



# ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ
# ಹೊಸ ಪ್ರಕಟಣೆಗಳು

## ರಜತೋತ್ಸವ ಮಾಲೆ

| | | |
|---|---|---|
| ೧. | ಗ್ರಂಥಸಂಪಾದನಾ ಪರಿಭಾಷಾಕೋಶ | ೩೬-೦೦ |
| ೨. | ಸಾಹಿತ್ಯೋಪಾಸಕರು | ೨೦೦-೦೦ |
| ೩. | ವಾಸವಾಂಬ ಪುರಾಣ | ೧೫೦-೦೦ |
| ೪. | ತಿಮ್ಮಪ್ಪದಾಸರ ಕೀರ್ತನೆಗಳು | ೭೫-೦೦ |
| ೫. | ಬಿ.ಎಂ.ಶ್ರೀಕಂಠಯ್ಯ* | ೨೦-೦೦ |
| ೬. | ಎಂ.ವಿ. ಸೀತಾರಾಮಯ್ಯ | ೨೦-೦೦ |
| ೭. | ಶ್ರೀಕೃಷ್ಣಲೀಲಾಗಾನಂ | ೧೦೦-೦೦ |
| ೮. | ಕನ್ನಡ ತಿರುಕ್ಕುರುಳ್* | ೧೦೦-೦೦ |
| ೯. | ಕಾರಂತ ಕಿರಣ* | ೩೦-೦೦ |
| ೧೦. | ರಜತ ಸಿರಿ (ಸ್ಮರಣ ಸಂಚಿಕೆ)* | - |

## ಪ್ರತಿಷ್ಠಾನದ ಹೊಸ ಪ್ರಕಟಣೆಗಳು

| | | |
|---|---|---|
| ೧. | ಅಲಿಗೆ ಮೇಲಿನ ಹಸ್ತಪ್ರತಿಗಳು | ೧೦೦-೦೦ |
| ೨. | ವೆಂಕಟದಾಸರು ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು | ೭೫-೦೦ |
| ೩. | ಕನ್ನಡವೆಂಬ ಕನ್ನಡಿ | ೩೦-೦೦ |
| ೪. | ಕನ್ನಡದ ಶರಣ ಎಂ.ಆರ್.ಶ್ರೀ. | ೩೦-೦೦ |
| ೫. | ಶ್ರೀಸಾಹಿತ್ಯ ಮಣಿ ಮಾಲೆ | ೧೫೦-೦೦ |
| ೬. | ಇಂಗ್ಲೀಷ್ ಗೀತಗಳು (ಮೂಲದೊಂದಿಗೆ) | ೧೦೦-೦೦ |
| ೭. | ಪ್ರೊ|| ಡಿ.ಎಲ್.ಎನ್.ರ ಹೆಚ್ಚಿನ ಬರಹಗಳು, ಭಾಷಣಗಳು | ೨೦೦-೦೦ |
| ೮. | ಕುಂತಿಯ ಅಂತರಾಳ | ೫೦-೦೦ |
| ೯. | ಪರಿಷ್ಕೃತ ಹೊಸಗನ್ನಡದ ವ್ಯಾಕರಣ | ೧೦೦-೦೦ |
| ೧೦. | ಕ.ವೆಂ. ರಾಘವಾಚಾರ್ ಜೀವನ ಸಾಧನೆ | ೮೦-೦೦ |

## ಮುದ್ರಣದಲ್ಲಿ

೧೧. ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ
೧೨. ಬಿ.ಎಂ.ಶ್ರೀ. ಪ್ರತಿಷ್ಠಾನ-೨೫
೧೩. ಎಂ.ವಿ.ಸೀ. ಸಮಗ್ರ ಸಾಹಿತ್ಯಮಾಲೆ-೭; ಪ್ರಾಚೀನ ಸಾಹಿತ್ಯ ಸಮೀಕ್ಷೆ
೧೪. ಸುವರ್ಣ ಕರ್ನಾಟಕ ಮಾಲೆ ವಿಶೇಷ ಸಂಪುಟಗಳು: ೧, ೨, ೩

*ಪ್ರತಿಗಳು ಮುಗಿದಿವೆ.

# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

## ನಮ್ಮ ಲೇಖಕರು

ಪ್ರೊ. ಜಿ. ಅಬ್ದುಲ್ ಬಷೀರ್

ಡಾ. ದೇಜಗೌ

ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ

ಎಸ್.ವಿ. ಶ್ರೀನಿವಾಸರಾವ್

ಡಾ. ನಾ. ಗೀತಾಚಾರ್ಯ

ಶ್ರೀ ಎಂ.ಎನ್. ಪ್ರಭಾಕರ್

ಶ್ರೀ ಎಸ್. ಮಲ್ಲನಗೌಡ

ಡಾ. ಕೆಳದಿ ಗುಂಡಾಜೋಯಿಸ್

ಪ್ರೊ. ಕೆ.ಎಸ್. ಮಧುಸೂದನ